ಸೇವಾದಳ

# ಡಾ. ಹರಡೀಕರರು

ಬರೆದವರು:

ರಾ. ವೆ. ಕರಗುದರಿ

೧೯೩೪

ಬೆಲೆ ]          ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

# ಹಿರಿಯರ ಹರಕೆ

ತಾಯಿ ತಂದೆಗಳಿಲ್ಲದೆ ತಾನು ಪರದೇಶಿಯಾದರೂ, ಲಕ್ಷ್ಮೀಸಮೇತನಾಗಿ ಕ್ಷೀರಸಾಗರದಲ್ಲಿ, ಶೇಷಶಾಯಿಯಾಗಿರುವ ಸೃಷ್ಟಿನಾಯಕನಾದ ನಾರಾಯಣನೆತ್ತ! ತಾಯಿತಂದೆಗಳನ್ನು ಚಿಕ್ಕಂದಿನಲ್ಲಿ ಕಳೆದುಕೊಂಡು ಪರದೇಶಿಯಾಗಿ ದಾರಿದ್ರ್ಯಸಾಗರದಲ್ಲಿ ಮುಳುಮುಳುಗಿ ಏಳುವ, ನಮ್ಮ ಸೃಷ್ಟಿಸೇವಕನಾದ ನಾರಾಯಣನೆತ್ತ! ನಾಮನೆಪದಿಂದ ನಾರಾಯಣನಾದರೂ ಜೀವನೆಪದಿಂದ ನರನಾಗಿ ಮೆರೆವ ನಮ್ಮ ನಾರಾಯಣನು ತಾಯಿನಾಡಿಗೆ ಮುಡಿಯಾಗಿರುವದು ' ಸೋಜಿಗದ ಮಾತೆ! ಪರದೇಶ ಪರಭಾಷೆಗಳಿಗೆ ಮರುಳಾದ ನಮ್ಮ ಕನ್ನಡನಾಡಿನಲ್ಲಿ ಹುಟ್ಟಿ, ಪಾತಾಳಕ್ಕೆ ಮುಟ್ಟಿ (ಅಮೇರಿಕೆ), ಅಲ್ಲಿಟ್ಟ ಜ್ಞಾನದ ಬುತ್ತಿಯನ್ನು ಕಟ್ಟಿತಂದು, ತಾಯಿನಾಡಿಗೆ ಉಣಿಸುವ ಹವಣಿಕೆಯಿಂದ ಕುಣಿದಾಡುತ್ತ ಬಂದು, ಹಣಗಾಡುವ ತರುಣನನ್ನು ಹೆತ್ತ ತಾಯಿಯು ಧನ್ಯಳೇ ಸರಿ! ಆದರೇನು! ನರೆಸಂಬದವರ ಉರಿಯಿಂದ ಹುರಪಳಿಸಿಹೋದ ನಾರಾಯಣನು ನೆಟ್ಟ ತರುವು ಮುರಿಯಾಗಿ ಹೋಗಿದೆ. ನಾರಾಯಣನು ಈಗಂತೂ ನಿರಾಧಾರಿಯಾಗಿರುವನು. ನರರ ನರನರಗಳಲ್ಲಿ ತುಂಬಿ ತುಳುಕುವ ದೇಶಪ್ರೇಮವನ್ನು ಕಾರ್ಯಕಾರಿಯನ್ನಾಗಿ ಮಾಡುವ ಅವನ ಶಕ್ತಿಯು ಸ್ತಂಭಿತವಾಗಿದೆ. ಅವನು ಹುಟ್ಟಿಸಿದ ಸೇವಾದಲವು ದಲಿತವಾಗಿದೆ. ಸೈನಿಕರು ಚದರಿ ಹೋಗಿರುವರು. ಇಂಥ ವ್ಯಥೆಯ ಕಾಲದಲ್ಲಿ ಅವನ ಭಕ್ತರಲ್ಲೊಬ್ಬನಿಗೆ, ಅವನ ಚಿಕ್ಕ ಚರಿತ್ರೆಯನ್ನು ಬರೆಯಲು ಹುರುಪಾದದ್ದು ಹರುಷದ ಸಂಗತಿಯೇ ಸರಿ. ಇವನ ಚರಿತ್ರವು ಸಚೇತನರಿಗೆ ಚಿತ್ರರೂಪವಾಗಲೆಂದೂ ಮುಂದುವರಿಯುವ ತರುಣರಿಗೆ ಮಾದರಿಯಾಗಲೆಂದೂ ಭಯಕೃದ್ ಭಯನಾಶನನ ಅಭಯವರದಿಂದ, ಭೀಕರತೋರುವ ಕಾರ್ಮೋಡಗಳು, ಭೋರ್ಮಳೆಯುಂಗರಿದು, ಅರಿಯಿಂದುರಿದ ತರುವಾಂಕುರವನ್ನು ಪುನರ್ಜೀವಗೊಳಿಸಲು, ನಾರಾಯಣನನ್ನು ಸಮರ್ಥವಮಾಡಲು ಜನಾರ್ದನನು ಭರದಿಂದ ಧಾವಿಸಿ ಬರಲೆಂದು ನನ್ನ ಹಾರಯಿಕೆ.

ಕೌಜಲಗಿ ಶ್ರೀನಿವಾಸರಾಯ

# ನಮ್ಮ ನುಡಿ

ರಸಿಕರಿಗೆ ರಸದೂಟವನ್ನುಣಬಡಿಸುವ, ಕಾವ್ಯ, ನಾಟಕ, ಕತೆ, ಕಾದಂಬರಿಗಳನ್ನು; ರಾಷ್ಟ್ರದೇಳಿಗೆಗೆ ಕಾರಣರಾದ ಮಹಾಪುರುಷರ ಚರಿತ್ರೆಗಳನ್ನು; ಹೊಸಭಾಷೆ, ಹೊಸರೀತಿ, ಹೊಸಕಟ್ಟಿನಲ್ಲಿ ಸುಂದರವಾಗಿ ಪ್ರಸಿದ್ಧಿಸುವದೇ ನಮ್ಮ ಗುರಿ. ಬರೆಹಗಾರರಿಗೆ ಸ-ಕ್ರಿಯ ಸಹಾನುಭೂತಿಯನೀಯುವದೇ ನಮ್ಮ ವೈಶಿಷ್ಟ್ಯ.

ಯಾವುದೊಂದು ವಿಚಾರಕ್ಕೆ ಮಾತ್ರ ಅಂಟಿಕೊಳ್ಳದೆ, ಬಗೆ ಬಗೆಯ ವಿಚಾರಗಳಿಗೆಡೆಗೊಟ್ಟು, ಸರ್ವವನ್ನೂ ಸಮತೆಯಿಂದ ಕಂಡು, ಸಾಮಾನ್ಯರಿಗೆಲ್ಲ ನೈಜವಾದುದು ತಿಳಿಯುವಂತೆ ಮಾಡಬೇಕೆಂಬುದೇ ನಮ್ಮ ಮನೀಷೆ.

ತಮ್ಮ ಉಜ್ವಲ ಕರ್ತೃತ್ವ ಶಕ್ತಿಯಿಂದ ರಾಷ್ಟ್ರನಿರ್ಮಾಣಕರ್ತರಲ್ಲೊಬ್ಬರಾಗಿ ಕರ್ನಾಟಕಕ್ಕೊಂದೇಯಲ್ಲದೆ ಭಾರತಕ್ಕೂ ಭೂಷಣರಾದ ಡಾ. ಹರಡೀಕರರ ಚರಿತ್ರೆಯು, ನಾವು ಪ್ರಕಟಿಸಿದ ಮೊದಲ ಪುಸ್ತಕ. ಬರೆದವರು ಶ್ರೀ. ಕರಗುದರಿಯವರು; ದೇಶಕಾರ್ಯದಿಂದ ಚಿರಪರಿಚಿತರು. ತಮ್ಮ ತೊಂದರೆಗಳನ್ನೆಲ್ಲ ಬದಿಗಿರಿಸಿ, ನಾವು ಕೇಳಿದೊಡನೆ ಬರೆದುಕೊಟ್ಟ ಅವರಿಗೆ ಅಭಿನಂದನೆ. ಸದಾ ಕಾರ್ಯ ನಿರತರಾಗಿದ್ದರೂ ಕನ್ನಡಿಗರೇಳ್ಗೆಯನ್ನು ಹಗಲಿರುಳೂ ಕೋರುವ, ಹಿರಿಯರಾದ ಕರ್ನಾಟಕ ಭೂಷಣ ಕೌಜಲಗಿ ಶ್ರೀನಿವಾಸರಾಯರು ತಮ್ಮ ಒಲವಿನ ಹರಕೆಯನ್ನು ಕಳಿಸಿದುದಕ್ಕೆ ಅವರಿಗೆ ಅಭಿವಂದನೆ. ಸ್ವಲ್ಪ ವೇಳೆಯಲ್ಲಿ ಅಚ್ಚುಕಟ್ಟಾಗಿ ಅಚ್ಚು ಹಾಕಿ ಕೊಟ್ಟುದಕ್ಕಾಗಿ ಧಾರವಾಡದ ಮೋಹನ ಮುದ್ರಣಾಲಯದ ಒಡೆಯರಾದ ಶ್ರೀ. ರಾಯದುರ್ಗ ಕೃಷ್ಣಾಚಾರ್ಯರಿಗೆ ಧನ್ಯವಾದಗಳು.

ಈಗಿನ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ನಾವು ಕೈಕೊಂಡ ಕಾರ್ಯವು ಸಾಹಸದ್ದಾದರೂ ಓದುಗರ ಸಹಾಯದ ನಂಬುಗೆಯಿಂದ ಮುಂದುವರಿದಿದ್ದೇವೆ. ನಮಗೂ ಸ-ಕ್ರಿಯ ಸಹಾಯವನಿತ್ತು ನಾವು ಮಾಡುವ ಕನ್ನಡದ ಸೇವೆಗೆ ಮನ್ನಣೆಯನೀಯಬೇಕಾಗಿ ಬಿನ್ನಹ.

**ವಿಜಯ ದಶಮಿ**

**ಚಾಲುಕ್ಯ ವಿಕ್ರಮ ವರ್ಷ ೮೫೫** ಪ್ರಕಾಶಕರು

# ನನ್ನ ನುಡಿ

ಯಾವುದೊಂದು ವ್ಯಕ್ತಿಯು ಚರಿತ್ರೆಯನ್ನು ಬರೆವುದಾದರೆ ಜನತೆಗೆ ಉಪಯೋಗವಾಗುವಂತಿರಬೇಕದು. ಚರಿತ್ರನಾಯಕನ ಗುಣ, ಜೀವಿಸಿದ ಮಾರ್ಗ, ಮುಟ್ಟಿದ ನೆಲೆ ಜನರಿಗೆಲ್ಲ ಮಾರ್ಗದರ್ಶಿಗಳಾಗಿರಬೇಕು.

ಡಾಕ್ಟರರ ಜೀವನ ಜನತೆಗೊಂದು ಕೈದೀಪ. ಅಂತೆಯೇ ಇವರ ಚರಿತ್ರೆಯನ್ನು ಮುದ್ರಿಸಬೇಕೆಂದು ದಲದ ಸಂಘಟಕರು, ಕೆಲವು ಗೆಳೆಯರು, ಪ್ರಯತ್ನಪಟ್ಟರು. ಹಲವರು ಅರ್ಧಮರ್ಧ ಸಂಗತಿಗಳನ್ನು ದೊರಕಿಸಿ ಬರೆದದ್ದೂ ಆಯಿತು; ಮರಾಟಿ ಮಾಸಿಕ-ವೃತ್ತಪತ್ರಗಳಲ್ಲಿ ಡಾಕ್ಟರರ ಜೀವನದ ಚಿಕ್ಕಚಿಕ್ಕ ಬರೆಹಗಳೂ ಪ್ರಕಟವಾದುವು. ಮೊನ್ನೆಮೊನ್ನೆ "ತಮ್ಮ ಜೀವನದ ಸಂಗತಿಗಳನ್ನು ನಮಗೆ ಕೃಪೆ ಮಾಡಿ ವಿವರಿಸಿದರೆ, ಒಂದು ಪುಸ್ತಕ ಮಾಡಿ ಪ್ರಸಿದ್ಧಿಸುವೆವೆಂ"ದು ಮುಂಬಯಿ ಮಹಾರಾಷ್ಟ್ರಗಳಲ್ಲಿಯ ಡಾಕ್ಟರರ ಗೆಳೆಯರು ಕೇಳಿದರು. "ಇವರೆಲ್ಲ ಇಷ್ಟು ತವಕ ಪಡುತ್ತಿರುವಾಗ, ಹತ್ತು ವರ್ಷಗಳಿಂದ ಹತ್ತಿರವಿದ್ದ ನಾನೇ- ಈ ಕಾರ್ಯ ಮಾಡಿಬಿಟ್ಟರೆ ಚೆನ್ನಲ್ಲವೆ?" ಎಂದು ತಲೆಯಲ್ಲಿ ವಿಚಾರ ಬಂತು ನನಗೆ. ಹೊತ್ತು ಸಾಧಿಸಿಕೊಂಡು "ನೀವು ಹೊರಗಿನವರಿಗೇ ನಿಮ್ಮ ಜೀವನದ ಸಂಗತಿಗಳನ್ನು ಕೊಡುವದಕ್ಕಿಂತ ನನಗೇ ಕೊಡಬೇಕು, ನಾನೇ ಚರಿತ್ರ ಬರೆಯುವೆ"ನೆಂದು ಡಾಕ್ಟರರನ್ನು ಕೇಳಿದೆ. "ನನ್ನ ಚರಿತ್ರೆಯನ್ನು ಬರೆಯುವಷ್ಟು ಪಾತ್ರತೆ ನನ್ನಲ್ಲಿದೆಯೇ? ನನಗೇನೂ ಅದರ ಅವಶ್ಯಕತೆ ತೋರುವದಿಲ್ಲ, ಅದನ್ನು ಬರೆಯುವ ವೇಳೆ ಇನ್ನೂ ಬಂದಿಲ್ಲ"ವೆಂದು ಹೇಳಿಬಿಟ್ಟರು ಡಾಕ್ಟರರು. "ನಿಮ್ಮ ಯೋಗ್ಯತೆ ನಿಮಗೆ ತಿಳಿಯುವದೆಂತು? ಮನುಷ್ಯನು ಎಷ್ಟೇ ದೊಡ್ಡ ಯೋಗ್ಯತೆಗೆ ಮುಟ್ಟಿದರೂ ತನಗಿಂತ ಹೆಚ್ಚಿನವರನ್ನು ಕಂಡು, ತಾನು ಸಾಮಾನ್ಯನೆಂದು ತಿಳಿದುಕೊಳ್ಳುವದು ಸ್ವಾಭಾವಿಕ. ಜನರೆಲ್ಲ ನಿಮ್ಮ ಜೀವನದ ಸಂಗತಿಗಾಗಿ ಹಾತೊರೆಯುತ್ತಿರುವದು ಚರಿತ್ರೆಯ ಅವಶ್ಯಕತೆಯನ್ನು ತೋರುವದಲ್ಲದೆ ಮತ್ತೇನು? ನೀವೇನೂ ಯೋಚಿಸದೆ

ನಿಮ್ಮ ಜೀವನದ ಸಂಗತಿಗಳನ್ನೆಲ್ಲ ಹೇಳಲೇಬೇಕೆಂ''ದು ನಾನು ಗಂಟೇ ಬಿದ್ದೆ. '' ಒಳ್ಳೇದು, ಹೊತ್ತು ಸಿಕ್ಕಾಗ ನೋಡೋಣ''ವೆಂದು ಅವರೂ ಸುಮ್ಮನಾದರು.

ಭೂಕಂಪ ಪೀಡಿತರ ಸೇವೆಗೈಯಲು ಮೊನ್ನೆ ನಾವೆಲ್ಲರೂ ಬಿಹಾರಕ್ಕೆ ಹೋದಾಗ, ನಾನೂ ಡಾಕ್ಟರರೂ ತಿಂಗಳೊಪ್ಪತ್ತು ಮೋತೀಹಾರಿ ಪಟ್ಟಣದಲ್ಲಿ ಕೂಡಿಯೇ ಇದ್ದೆವು. ವೇಳೆ ಉಳಿದಾಗೆಲ್ಲ ನಾನು ಜೀವನದ ವಿಷಯಕ್ಕೆ ಡಾಕ್ಟರರನ್ನು ಕೇಳುತ್ತಿದ್ದೆ, ಅವರು ಹೇಳುತ್ತಿದ್ದರು. ಎಲ್ಲವನ್ನು ಸಂಗ್ರಹಿಸಿ ಅನುಕೂಲತೆ ನೋಡಿ ಮುದ್ರಿಸಬೇಕೆಂದು ನಾನು ಹವಣಿಸುತ್ತಿದ್ದೆ.

ಹುಬ್ಬಳ್ಳಿಗೆ ಬಂದೊಡನೆ, '' ಡಾಕ್ಟರರ ಚರಿತ್ರೆಯನ್ನು ಬರೆದು ಕೊಡಿರಿ. ನಾವು ಪ್ರಕಟಿಸುವೆ''ವೆಂದು ಇಲ್ಲಿಯ **ಸಾಹಿತ್ಯ ಭಾಂಡಾರದ**ವರು ಕೇಳಿದರು. ಇತರ ಪ್ರಾಂತಗಳಲ್ಲಿ ದೇಶಸೇವಕರ ಜೀವನಚರಿತ್ರೆಗಳು ಪ್ರಸಿದ್ಧವಾಗುತ್ತಿದ್ದರೂ ಕರ್ನಾಟಕದಲ್ಲಿ ಮಾತ್ರ ಈ ಕಾರ್ಯವಿನ್ನೂ ಕಡಿಮೆಯೇ ಇದೆ. ಹರಡೀಕರರ ಚರಿತ್ರೆಯೇ ಈ ಕಾರ್ಯದ ಮೊದಲ ಪ್ರಯತ್ನವೆಂದರೂ ಸರಿ. ಇದರಂತೆ ಕರ್ನಾಟಕದ ಸತ್ಪುತ್ರರ ಜೀವನ ಚರಿತ್ರೆಗಳನ್ನು ಒಂದೊಂದರಂತೆ ಪ್ರಕಟಿಸಬೇಕೆಂದು ಮಾತಾಡಿದೆವು. ಅದರಂತೆ ನಾನು ಡಾಕ್ಟರರ ಜೀವನಚರಿತ್ರೆಯನ್ನು ಬರೆದು ಸಿದ್ಧಮಾಡಿದೆ. ಭಾಂಡಾರದವರು ಅದನ್ನು ಅಚ್ಚಿಗಾಗಿ ಕೊಟ್ಟೇ ಬಿಟ್ಟರು.

ಗ್ರಂಥಲೇಖನಕಲೆಯಲ್ಲಿ ನುರಿಯದಿದ್ದರೂ ನುರಿಯಬೇಕೆಂಬಾಶೆಯಿಂದ ಈ ಕಾರ್ಯಕ್ಕೆ ಕೈ ಹಾಕಿರುವೆ. ಭಾಷೆಯ ತಿದ್ದುಪಡಿಗೆ ನೆರವಾದವರು ಸಾಹಿತ್ಯ ಭಾಂಡಾರದವರು; ಬರೆಯುವಾಗ ಹಲಕೆಲವು ಸೂಚನೆ, ಅಭಿಪ್ರಾಯಗಳನ್ನಿತ್ತವರು ನನ್ನ ಬಂಧುಭಗನಿಯರು. ಇವರೆಲ್ಲರ ಉಪಕಾರವನ್ನು ಮನಃಪೂರ್ವಕವಾಗಿ ಸ್ಮರಿಸುವೆ. ನನ್ನ ಬರೆಹವು ಅಷ್ಟೊಂದು ಚಿತ್ತಾಕರ್ಷಕವಾಗಿರದಿದ್ದರೂ ಹರಡೀಕರರ ಜೀವನದಲ್ಲಿಯ ಮನೋವೇಧಕ, ಬೋಧಪ್ರದ ಸಂಗತಿಗಳು ನನ್ನ ಭಾಷಾಶೈಲಿಯ ಬೇಸರಿಕೆಯನ್ನು ಕಳೆದು, ಓದುಗರನ್ನು ಆನಂದಾಶ್ಚರ್ಯಗಳಲ್ಲಿ ಮುಳುಗಿಸುವುವೆಂಬ ಭರವಸೆಯಿಂದ, ಗ್ರಂಥಕರ್ತನ ದೃಷ್ಟಿಯಿಂದ

ನನ್ನಲ್ಲಿ ನ್ಯೂನತೆಗಳಿದ್ದರೂ ಲಕ್ಷ್ಯಕ್ಕೆ ತಾರದೆ, ಜನರ ಕೈಯಲ್ಲಿ ಈ ಪುಸ್ತಕವನ್ನು ಕೊಡುವ ಸಾಹಸ ಮಾಡಿರುವೆ. ಇಷ್ಟೆಲ್ಲ ಬರೆದರೂ ಹರಡೀಕರರ ಜೀವನದಲ್ಲಿಯ ಹಲಕೆಲವು ಸಂಗತಿಗಳು ಬಾರದೆ ಉಳಿದಿರ ಬಹುದು; ಪುಸ್ತಕದಲ್ಲಿ ಕೆಲವು ದೋಷಗಳು ಸಿಗಬಹುದು. ಇದಕ್ಕೆಲ್ಲ ಈ ಸಲದ ಮುಂಬಯಿ ಕಾಂಗ್ರೆಸ್ ಅಧಿವೇಶನದ ಪರ್ವವನ್ನು ಸಾಧಿಸ ಬೇಕೆಂಬುದೇ ಕಾರಣ. ಅದಕ್ಕಾಗಿ ಓದುಗರ ಕ್ಷಮೆ ಬೇಡುವೆ.

ಡಾಕ್ಟರ್ ಹರಡೀಕರರಂತಹ ಕರ್ಮವೀರರ ಚರಿತ್ರೆಯನ್ನು ಬರೆ ಯುವ ಭಾಗ್ಯವು ದೊರೆತದ್ದಕ್ಕಾಗಿ ತುಂಬಾ ಆನಂದ–ಅಭಿಮಾನವೆನಗೆ. ರಾಜಕಾರಣದಲ್ಲಿ ನನಗಿದ್ದ ಅಲ್ಪ ಜ್ಞಾನವನ್ನೂ ಸ್ವಲ್ಪ ಅನುಭವವನ್ನೂ ಅವರ ಹತ್ತಿರವಿದ್ದೇ ಸಂಪಾದಿಸಿದೆ. ಈ ರೀತಿಯಾಗಿ ಗುರುಗಳಾಗಿದ್ದ ಹರ ಡೀಕರರಿಗೆ ಗುರುದಕ್ಷಿಣೆ ಒಪ್ಪಿಸುವುದು ಶಿಷ್ಯನ ಕರ್ತವ್ಯ. ಇತರ ರೀತಿ ಯಿಂದ ಒಪ್ಪಿಸಲಾರದ ನಾನು, ಅವರ ಬೋಧಪ್ರದ ಜೀವನ ಸಂಗತಿ ಗಳನ್ನು ಕನ್ನಡ ನಾಡಿನಲ್ಲೆಲ್ಲ– ಏಕೆ–ಭಾರತದಲ್ಲೆಲ್ಲ ಹರಡುವ ಉದ್ದೇಶ ದಿಂದ ಬರೆದ ಈ ಅಲ್ಪಕೃತಿಯನ್ನೇ ಗುರುದಕ್ಷಿಣೆಯೆಂದು ಅವರಿಗರ್ಪಿ ಸಿರುವೆ.

ಹರಡೀಕರರ ಜೀವನ ಆದರ್ಶ ಜೀವನ. ಜೀವನದ ಗುರಿಯು ಗೊತ್ತು ಮಾಡಿ, ಸಾಧನೆಯನ್ನು ತಿಳಿದು, ಮುಂದರಿಯುವ ಗುಣಗಳ ನ್ನಳವಡಿಸಿ, ಬಡತನದಲ್ಲಿಯೂ ಮುಂದರಿದು, ಕಷ್ಟಗಳೆಂದರೇನು ? ಅವು ಪ್ರಗತಿಗೆ ತಾರಕಗಳೇ ಮಾರಕಗಳೇ ? ಎಂಬುದನರಿತು, ಜೀವನದ ಗುರಿಯು ನೆರವೇರಿಸಲು ಹಗಲಿರುಳೂ ಹವಣಿಸುತ್ತಿರುವ ಆದರ್ಶ ಜೀವನ. ಇಂತಹ ಜೀವನವನ್ನು ಮುಂದಿಟ್ಟುಕೊಂಡು ಅವರಂತಹ ಇನ್ನೊಂದು ವ್ಯಕ್ತಿಯು ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದು, ನಾಡಸೇವೆಗೈದರೆ ನನ್ನ ಶ್ರಮ ಸಾರ್ಥಕವಾಯಿತೆಂದು ತಿಳಿಯುತ್ತೇನೆ.

೧೭–೧೦–೩೪ } ರಾ. ವೆ. ಕರಗುದರಿ
ಹುಬ್ಬಳ್ಳಿ }

# ಪರಿವಿಡಿ

# ಮುನ್ನುಡಿ

ಕರ್ನಾಟಕದಲ್ಲಿ ಹುಟ್ಟಿ ಬೆಳೆದು ಬಾಳಿ ಭಾರತದಲ್ಲಿ ಬೆಳಗುತ್ತಿರುವ ಡಾ. ಹರಡೀಕರರಂಥ ನಿಃಸೀಮ ದೇಶಭಕ್ತರ ಜೀವನ ಚರಿತ್ರಕ್ಕೆ ಮುನ್ನುಡಿಯನ್ನು ಬರೆಯುವ ಮಾನವನ್ನು ನನ್ನಂತಹ ಓರ್ವ ಸಾಮಾನ್ಯನಿಗೆ ಕೊಟ್ಟು ಮನ್ನಿಸಿದ್ದಕ್ಕೆ ನಾನು ಬರೆಹಗಾರರಿಗೆ ಧನ್ಯವಾದಗಳನ್ನರ್ಪಿಸದೆ ಇರಲಾರೆನು. ಅಯ್ತು, ಇದೇ ಒಂದು ನನ್ನ ಅಲ್ಪ ಸೇವೆಯೆಂದು ತಿಳಿಯುವೆ.

ಕನ್ನಡದಲ್ಲಿ ಇನ್ನೂ ಚರಿತ್ರಲೇಖನವು ತೀರ ಬಾಲ್ಯದಲ್ಲಿದೆ ಎಂದೇ ಹೇಳಬಹುದು. ಈ ನಾಡಿನಲ್ಲಿ ಆಗಿ ಹೋದ ಅನೇಕ ಇತಿಹಾಸ ಪ್ರಸಿದ್ಧ ವ್ಯಕ್ತಿಗಳ ಜೀವನ ಚರಿತ್ರವನ್ನು ಬರೆಯಲಿಕ್ಕೆಯೆ ಇನ್ನೂ ಆರೂ ಗತಿ ಇಲ್ಲ. ಅಂದ ಬಳಿಕ ಸದ್ಯಕ್ಕೆ ಬಾಳುತ್ತಿರುವವರ ಪಾಡೇನು ? ಇತ್ತೀಚೆ ಮಾತ್ರ ಲೇಖಕರ ಲಕ್ಷ್ಯವು ಇತ್ತ ಸಾಗುತ್ತಿರುವದು ಶುಭಲಕ್ಷಣವು. ನಮ್ಮ ಸಮಾಜದಲ್ಲಿ ಹುಟ್ಟಿ, ಅತ್ಯಂತ ಪ್ರತಿಕೂಲ ಪರಿಸ್ಥಿತಿಯೊಡನೆ ಕಡುಗಲಿಗಳಂತೆ ಕಾದಾಡಿ, ಆದರ್ಶ ಭೂತವಾದ ಜೀವನ ಕ್ರಮವನ್ನು ನಡೆಯಿಸಿ, ನಾಡಿಗೆಲ್ಲ ಪಾಠವನ್ನು ಹಾಕಿಕೊಡುವ ವ್ಯಕ್ತಿಗಳ ಜೀವನದಲ್ಲಿಯ ಅನೇಕ ಸ್ಫೂರ್ತಿದಾಯಕ ಸಂಗತಿಗಳನ್ನು ಸಂಗ್ರಹಿಸಿ, ಆಕರ್ಷಕ ಶೈಲಿಯಲ್ಲಿ ಜನಸಾಮಾನ್ಯರೆದುರಿಗಿಡುವದು ಒಂದು ಮಹತ್ಕಾರ್ಯವೆಂದೇ ನಾನು ತಿಳಿದಿರುವೆನು. ಇಲ್ಲಿ ಶ್ರೀ. ಕರಗುದರಿಯವರು ಅಂಥ ಕಾರ್ಯವನ್ನು ಮಾಡುವ ಪ್ರಯತ್ನಕ್ಕೆ ಕೈಹಾಕಿದ್ದಾರೆನ್ನಬಹುದು. ಇದು ಅವರ ಪ್ರಥಮ ಪ್ರಯತ್ನವು. ಆ ದೃಷ್ಟಿಯಿಂದ ಇದರಲ್ಲಿ ಹಲವು

ದೋಷಗಳೂ ಇರಬಹುದು. ಆದರೆ ಇಲ್ಲಿ ನಾನು ವಿಮರ್ಶಕನಲ್ಲ, ಮುನ್ನುಡಿಕಾರನು. ಆದುದರಿಂದ ಅವರಿಗೆ ನನ್ನ ಪೂರ್ಣ ಆಶೀರ್ವಾದ ಗಳನ್ನರ್ಪಿಸದೆ ಇರಲಾರೆನು.

ಇದು ಡಾಕ್ತರ ಹರಡೀಕರರ ಅಲ್ಪ ಪರಿಚಯವೆಂದು ಹೇಳಬ ಹುದೇ ಹೊರತು ಅವರ ಜೀವನ ಚರಿತ್ರವೆಂದು ಹೇಳಲಾಗದು. ಅವರ ಕರ್ತೃತ್ವಪೂರ್ಣ ಮತ್ತು ವ್ಯಾಪಕ ಚರಿತ್ರವನ್ನು ಬರೆಯಬೇಕಾದರೆ ಇದರ ನಾಲ್ಕರಷ್ಟು ಪುಟಗಳಾದರೂ ಸಾಲವು ಎಂದು ನನ್ನ ಅಭಿಪ್ರಾಯವು. ಆದರೆ ಕನ್ನಡ ಸಾಹಿತ್ಯದ ಸದ್ಯದ ಪರಿಸ್ಥಿತಿಯಲ್ಲಿ ಇಷ್ಟೇ ಒಂದು ಚಿಕ್ಕ ಪುಸ್ತಕವು ಲೋಕಪ್ರಿಯವಾದರೆ ಸಾಕಾಗಿದೆ. ಇದರಲ್ಲಿ ಶ್ರೀ. ಕರಗುದರಿ ಯವರು ಡಾಕ್ಟರರ ಜೀವನ ರಹಸ್ಯವನ್ನು ಹುಡುಕಿ ಅದನ್ನು ಜನರೆ ದುರಿಗೆ ಇಡಲು ಯತ್ನಿಸಿದ್ದಾರೆ. ಅವರ ಜೀವನದಲ್ಲಿಯ ಅನೇಕ ಚಿಕ್ಕ ಪುಟ್ಟ ಅಸಾಮಾನ್ಯ ವೈಶಿಷ್ಟ್ಯಗಳ ಪರಿಚಯವನ್ನು ಜನರಿಗೆ ಮಾಡಿಕೊ ಟ್ಟಿದ್ದಾರೆ. ದೇಶಪ್ರೇಮದ ಏಕಮೇವ ಜ್ಯೋತಿಯು ಹೃದಯಾಂತರದಲ್ಲಿ ಉರಿಯುತ್ತಿದ್ದರೆ ಅದು ಅತ್ಯಂತ ಕಠಿಣ ಪ್ರಸಂಗಗಳಲ್ಲಿಯೂ ಮನುಷ್ಯ ನಿಗೆ ಸತ್ಪಥವನ್ನು ಹೇಗೆ ತೋರಿಸುವದು, ಹಾದಿಯಲ್ಲಿ ಬಂದ ಕಷ್ಟನಷ್ಟ ಗಳ ಗುಡ್ಡವನ್ನು ಹೇಗೆ ಸುಟ್ಟು ಬಿಡುವದು, ದುರ್ಮಾರ್ಗಕ್ಕೆ ಹೋಗುವ ಲೋಭವುಂಟಾದಾಗ ಕಾಮದಹನದ ದಿವ್ಯ ಕಾರ್ಯವನ್ನು ಆ ಜ್ಯೋತಿಯು ಯಾವ ರೀತಿ ಮಾಡುವದು ಇದನ್ನೆಲ್ಲ ಶ್ರೀ. ಕರಗುದರಿ ಯವರು ಚನ್ನಾಗಿ ತೋರಿಸಿಕೊಟ್ಟಿದ್ದಾರೆ.

ಹಿಂದುಸ್ಥಾನದ ತರುಣರ ಅಂತಃಕರಣದಲ್ಲಿ ದೇಶಪ್ರೇಮವಿಲ್ಲ ಎಂದು ನಾನು ಅನ್ನಲಾರೆ. ಅವರ ಅಂತಃಕರಣವೆಂದರೊಂದು ದೇಶಾ ಭಿಮಾನದ ಸೆಲೆಯೊಡೆಯದ ಮರುಭೂಮಿ ಎಂದು ಅನ್ನಲಿಕ್ಕೆ ನಾನು ಸಿದ್ಧನಿಲ್ಲ. ಹೀಗೆ ಅನ್ನುವ ಅನ್ಯಾಯವನ್ನು ನಾನು ಮಾಡಲಾರೆ. ಶಾಲೆ ಗಳಲ್ಲಿರುವ ಹುಡುಗರಲ್ಲಿ ನಡೆದ ಮಾತುಗಳನ್ನು ಕೇಳಿದರೆ, ಕಾಲೇಜದ ವಿದ್ಯಾರ್ಥಿಗಳಲ್ಲಿ ನಡೆದ ವಾಗ್ವಾದಗಳನ್ನು ನೋಡಿದರೆ ಇವರೆಲ್ಲರೂ

ಮುಂದೆ ಲೋ. ಟಿಳಕರು, ವಿವೇಕಾನಂದರು, ಇಲ್ಲವೆ ಮಹಾತ್ಮಾ ಗಾಂಧಿಯವರು ಅಥವಾ ಟಾಗೋರರಾಗುವರೆಂಬ ಭಾಸವಾಗುವದು ಆದರೇನು ? ಅವರು ವ್ಯವಹಾರಸೃಷ್ಟಿಯಲ್ಲಿ ಕಾಲಿಡುವದೊಂದೇ ತಡವು, ಸಂಸಾರ ಪಥದಲ್ಲಿ ಹೆಜ್ಜೆಯನ್ನಿಕ್ಕುವದೊಂದೇ ತಡವು, ಬಹುಶಃ ಅವ ರೆಲ್ಲರೂ ಹೊಟ್ಟೆ ಹೊರಕೊಳ್ಳುವ, ನಿಃಸತ್ವ ಮಕ್ಕಳನ್ನು ಹಡೆಯುವ ನಿರ್ಜೀವ ಯಂತ್ರಗಳಾಗಿ ಹೋಗುತ್ತಾರೆ. ಇದು ಹೀಗೇಕೆ? ಎಲ್ಲಿ ಹೋಯಿತು ಅವರ ದೇಶಪ್ರೇಮವು? ಎಲ್ಲಿ ಮಾಯವಾಯಿತು ಅವರ ಮಾತುಗಾರಿಕೆಯು? ಅವೆಲ್ಲ ಕನಸೇ? ಅವೆಲ್ಲ ಕಲ್ಪನೆಯ ಕ್ಷಣಿಕತರಂಗ ಗಳೇ? ಅದೊಂದು ಮಕ್ಕಳ ಮಣ್ಣಾಟವೇ?

ಅಹುದು. ಮತ್ತಿನ್ನೇನು? ಒಮ್ಮೆ ದೇಶಪ್ರೇಮದಿಂದ ತುಂಬಿ ತುಳುಕುವ ಎಳೆ ಎದೆಗಳಲ್ಲಿ ಈ ಹೊತ್ತು ಭಾರತಮಾತೆಗೆ ನಿಲ್ಲಲು ಎಡೆ ಯಿಲ್ಲ! ಆಜನ್ಮ ಬ್ರಹ್ಮಚಾರಿಯಾಗಿದ್ದು ತನ್ನ ಜೀವನ ಸರ್ವಸ್ವವನ್ನು ರಾಷ್ಟ್ರದೇವಿಗೆ ಅರ್ಪಿಸುವದಂತೂ ಒತ್ತಟ್ಟಿಗಿರಲಿ. ಸ್ವದೇಶಿಯ ವ್ರತ ವನ್ನು ಪಾಲಿಸುವ, ಒಂದು ಧಾರ್ಮಿಕ ಭಾವನೆಯಿಂದ ಖಾದಿಯನ್ನು ಧರಿಸುವ, ತಪ್ಪದೆ ದೇಶಕಾರ್ಯಕ್ಕೆ ನಿಯಮಿತವಾಗಿ ಹಣವನ್ನು ಸಲ್ಲಿ ಸುವ, ದೇಶದಲ್ಲಿ ಏನು ನಡೆದಿದೆ ಎಂಬುದನ್ನು ಜಿಜ್ಞಾಸೆಯಿಂದ ಓದುವ, ದೇಶಸೇವೆಗೆ ಸರ್ವಸ್ವವನ್ನು ಅರ್ಪಿಸಿದವರಿಗೆ ಸತತ ಸಹಾಯ ಮಾಡುವ ಜನರು ಎಲ್ಲಿದ್ದಾರೆ, ಎಷ್ಟಿದ್ದಾರೆ ನಮ್ಮಲ್ಲಿ? ಹೀಗೇಕೆ, ಎಂದು ಕೇಳುವ ದೊಂದೇ ತಡವು, ನನ್ನ ತಾಯ್ತಂದೆಗಳು ಮುಪ್ಪಿನವರು, ಸಂಸಾರದ ಭಾರವೆಲ್ಲ ನನ್ನ ಮೇಲೆ ಇದೆ, ಏನು ಮಾಡಬೇಕು, ಹೆಂಡಿರ ಮಕ್ಕಳಿಗೆ ಏನು ಹೇಳಬೇಕು, ಹೊಟ್ಟೆಯೊಂದದೆಯಲ್ಲ, ಎಂಬ ಮುಂತಾದ ಕಾರಣ ಗಳ ಮಾಲಿಕೆಯನ್ನು ನಿಮ್ಮೆದುರಿಗೆ ಒಡ್ಡುವರು. ಡಾ. ಹರಡೀಕರರಲ್ಲಿ ದೇಶಪ್ರೇಮದ ಬಲವು ಸಾಕಷ್ಟು ಇರದಿದ್ದರೆ ಅವರೂ ಒಬ್ಬರು ಇಂಥ ಕಾರಣಗಳನ್ನು ಹೇಳುವ ಸಾಮಾನ್ಯ ಸಂಸಾರಿಗಳಾಗುತ್ತಿದ್ದರು.

ಆದರೆ ನಮ್ಮೆಲ್ಲರ ಸುದೈವವು, ಕರ್ನಾಟಕದ ಸೌಭಾಗ್ಯವು.

ಹೊಟ್ಟೆ ಪಾಡಿಗಾಗಿ ನೌಕರಿಯನ್ನು ಸ್ವೀಕರಿಸದೆ, ಗೌರಕಾಯ ತರುಣಿಯ ಮೋಹಕ್ಕೊಳಗಾಗದೆ, ಹಣವನ್ನು ಗಳಿಸಿ ಸುಖಿಸುವ ಭರಕ್ಕೆ ಬೀಳದೆ, ಈ ದಿನ ಅವರು ಆಜನ್ಮ ಬ್ರಹ್ಮಚಾರಿಗಳಿದ್ದು, ನಿಷ್ಕಾಂಚನ ವೃತ್ತಿಯಿಂದ ರಾಜಸನ್ಯಾಸವನ್ನು ಸ್ವೀಕರಿಸಿ, ಹಗಲಿರುಳು ಈ ದುರ್ದೈವೀ ದೇಶದ ಏಳ್ಗೆಗಾಗಿ ಹೆಣಗಾಡುತ್ತಲಿರುವರು. ಈ ಹೊತ್ತು ಅವರಿಗೆ ಎರಡನೇ ವ್ಯಾಪವಿಲ್ಲ, ಅನ್ಯ ವಿಚಾರವಿಲ್ಲ, ಬೇರೆ ಉದ್ಯೋಗವಿಲ್ಲ. ರಾಷ್ಟ್ರದ ಏಕಾಂತಿಕ ಭಕ್ತಿಯ ಮೂರ್ತಿಸ್ವರೂಪವನ್ನು ನೋಡುವುದಾದರೆ ಅವರನ್ನು ನೋಡಬೇಕು, ಅವರ ಚರಿತ್ರವನ್ನು ಓದಬೇಕು.

ಏನು ಮಾಡಲಿ? ಡಾಕ್ತರರು ನನ್ನ ಚಿರಪರಿಚಯದವರು. ಇನ್ನೂ ಅನೇಕ ಮಾತುಗಳನ್ನು ಬರೆಯಬೇಕೆಂದು ಲೆಕ್ಕಣಿಕೆಯು ಹಾತೊರೆಯುತ್ತಲಿದೆ. ಆದರೆ ನನಗೆ ಇದ್ದ ವೇಳೆಯ ಅವಕಾಶ ಮತ್ತು ಪ್ರಕಾಶಕರು ಹೇಳಿಕೊಟ್ಟ ಸ್ಥಳಾವಕಾಶ ಇವು ಇಲ್ಲಿ ಮುಗಿದವು.

**ರಂಗನಾಥ ರಾಮಚಂದ್ರ ದಿವಾಕರ**

# ಸೇನಾಪತಿ
# ಡಾ. ಹರಡೀಕರರು



‘ಸ್ವತಂತ್ರ ಭಾರತದ ಮೊದಲಿನ ಧ್ವಜವನ್ನು <u>ನಾನು</u>
ಹಾರಿಸುವುದೇ ನನ್ನ ಜೀವನದ ಗುರಿ’

# ನೋಕರಿಗಾಗಿ ಹುಟ್ಟಿಲ್ಲ.

ಬಡತನದ ಆಗು-ಹೋಗುಗಳ ಕಂಡವರಾರು ? ಕಾಲನ ಕೈಯ್ಯಲ್ಲಿ ಸಿಕ್ಕಿಲ್ಲವದು. ಮನಬಂದರೆ ಬರುವದು ಇಲ್ಲವಾದರೆ ಬಿಡುವದು. ಯಾವ ಕಾಲಕ್ಕೂ ಅದರ ಸುಖದುಃಖಗಳು ಒಂದೇ. ನಾಡಿನ-ಕಾಲದ ಪರಿಸ್ಥಿತಿಗಳು ಬಡತನವನ್ನು ಹೆಚ್ಚು ಕಡಿಮೆ ಮಾಡಲಾರವು. ಬಡತನ ವೆಂದರೆ ಬಹು ಕಷ್ಟ. ಯಾರಿಗೂ ಅದು ಬೇಕಿಲ್ಲ. ಅದು ಯಾರನ್ನೂ ಬಿಟ್ಟಿಲ್ಲ, ಬಿಡುವದಿಲ್ಲ. ಆದರೂ ಅದನ್ನು ನೀಗುವ ಉಪಾಯ ಮಾಡ ದಿರುವವರು ಕಡಿಮೆ. ನೋಕರಿಯು ಅದಕೊಂದು ಮದ್ದೇ.

ಮನೆ ತುಂಬ ಮಕ್ಕಳಾದರೆ ಬಡತನಕ್ಕದು ಬೀಡಾರವೇ ಅಲ್ಲವೆ ! ಹನ್ನೆರಡು ಮಕ್ಕಳನ್ನು ಹೆತ್ತ ತಾಯ್ತಂದೆಗಳು. ತಿಂಗಳಿಗೆ ಬರುವದು ಐವತ್ತು ರೂಪಾಯಿ ಸಂಬಳ. ಇಂತಹ ಮನೆತನ ಹೇಗಿರಬಹುದು? ಸುಬ್ರಾಯನ ಪೂರ್ವಜರು ರತ್ನಾಗಿರಿ ಜಿಲ್ಹೆಯ ಹರಡಿಯವರು. ಧಾರವಾಡ ಜಿಲ್ಹೆ ಹಾನಗಲ್ಲ ತಾಲೂಕಿನ ತಿಳವಳ್ಳಿಯಲ್ಲಿ ಬಂದು ನೆಲೆಸಿ ದರು. ತಂದೆ ತೀರಲು ಚಿಕ್ಕಂದಿನಲ್ಲಿ ಸುಬ್ರಾಯ, ಅವನ ತಾಯಿ ಧಾರವಾಡ ಸೇರಿದರು. ಇಲ್ಲಿಯೆ ಅವರದೊಂದು ಮನೆ ಇತ್ತು. ಕಷ್ಟ ಪಟ್ಟು ಕಲಿತ ಬಳಿಕ ಸುಬ್ರಾಯನಿಗೆ ಕೋರ್ಟಿನಲ್ಲಿ ನಾಝರ ಕೆಲಸ ಸಿಕ್ಕಿತು. ಮಕ್ಕಳು ಹುಟ್ಟಿದಂತೆ ಸಂಬಳದ ರೊಕ್ಕ ಸಾಲುತ್ತಿರಲಿಲ್ಲ. ಆದರೂ ಸಾಲಮಾಡದೆ ಪ್ರಪಂಚ ಸಾಗಿಸುತ್ತಿದ್ದ. ಇವನ ಸ್ನೇಹಿತ ರೆಂದರೆ ಧಾರವಾಡ ಟ್ರೇನಿಂಗಕಾಲೇಜದ ಪ್ರಿನ್ಸಿಪಾಲರಾಗಿದ್ದ ಶ್ರೀ.ಕರಂದಿ ಕರರು. ಬಿಡುವಿನಲ್ಲೆಲ್ಲ ಮಾತು ಕತೆಗಳಿಗೆ ಇವರ ಮನೆಗೆ ಹೋಗು ತ್ತಿದ್ದ. ವಯಸ್ಸಾದ ಮೇಲೆ ಒಂದುದಿನ ಮುಚ್ಚಂಜೆಯಲ್ಲಿ ಕರಂದಿಕರರ

ಮನೆಯಿಂದ ಬರುವಾಗ್ಗೆ ಈಗಿನ ಮಿತ್ರಸಮಾಜದ ಎದುರಿನ ಕಾಲುವೆಯಲ್ಲಿ ದಾರಿಗಾಣದೆ ಬಿದ್ದು ಕಾಲು ಮುರಕೊಂಡರು. ಇದಾದ ಐದಾರು ವರುಷಕ್ಕೆ ೧೮೯೩ರಲ್ಲಿ ತುಂಬಿದ ಮನೆ ಬಿಟ್ಟು ಸುಬ್ರಾಯರು ಮರಣಕ್ಕೆ ಶರಣೆಂದರು.

ಎಷ್ಟೇ ಬಡತನವಿದ್ದರೂ ಆದೊಂದು ನೋಕರಿಯಿಂದ ಹೇಗಾದರೂ ಕಾಲ ಕಳೆದ ಆ ಮನೆತನದ ಪ್ರಾಣವೇ ಹೋದಂತಾಯಿತು. ಮನೆತುಂಬ ಸಣ್ಣ ಸಣ್ಣ ಮಕ್ಕಳು, ಹಿರಿಯ ಹುಡುಗನಿಗಿನ್ನೂ ನೋಕರಿಯಿರಲಿಲ್ಲ. ಸುಬ್ರಾಯ ಅಲ್ಪಸ್ವಲ್ಪ ಹಣಕೊಡಿಸಿಟ್ಟಿದ್ದ ಬೇರೊಬ್ಬ ಸ್ನೇಹಿತನಲ್ಲಿ. ಈ ಕಾಲಕ್ಕೆ ಅವರು ಆದನ್ನು ಮುಳುಗಿಸಿ ಬಿಟ್ಟರು. ಸರಿ, ಮುಂದೇನು ಗತಿ ! ಸಾಲಕೇಳಿದರೆ ಕೊಡುವರಾರು ? ಹುಡುಗರೊ ಇನ್ನೂ ಕಲಿಯತಕ್ಕವರು. ಹೀಗಾಗಿ ಎರಡು ಗಂಡು ಎರಡು ಹೆಣ್ಣು ಕೂಸಿರುವಾಗಲೇ ತೀರಿದ್ದರೂ, ಇನ್ನೂ ಆರು ಗಂಡು ಎರಡು ಹೆಣ್ಣು ಮೇಲೊಂದು ಸಾಕಿದ ಹುಡುಗಿ. ಗಂಡ ತೀರಿದ; ಗಳಿಸಿದ ಹಣ ಮುಳುಗಿ ಹೋಯಿತು; ಮನೆತುಂಬ ಮಕ್ಕಳು; ಮಧ್ಯಾಹ್ನಕ್ಕೆ ಅಭಾವದ ಸ್ಥಿತಿಯನ್ನು ನೋಡಿ ಬಡತನದಲ್ಲಿಯೇ ಸಂಸಾರ ಮಾಡಿದ್ದರೂ ಯಮುನಾಬಾಯಿಗೆ ಹುಚ್ಚು ಹಿಡಿದಂತಾಯಿತು. ಏನೇ ಆದರೂ ಸಂಸಾರ ಸಾಗುವದೆಂತು ?

ಪ್ರಾಮಾಣಿಕತನದಿಂದ ಪಾಪಕ್ಕೆ ಹೆದರಿ ಪ್ರಪಂಚ ಮಾಡುತ್ತಿದ್ದವರ ಕಷ್ಟವನ್ನು ನೋಡಿ ಮರುಗದವರಾರು ? "ದಯವೇ ಧರ್ಮದ ಮೂಲವಯ್ಯ" ಎಂದು ಜನರು ಪಟ್ಟೀ ಹಾಕಿ ಹಣಕೂಡಿಸಿ ಕೊಡಹತ್ತಿದರು ಈ ಕುಟುಂಬದ ಚರಿತಾರ್ಥಕ್ಕೆ. ಮುಂದೆ ಕೆಲವು ದಿನಗಳ ಮೇಲೆ ಸುಬ್ರಾಯನ ಸತ್ಕೃತಿಯ ಫಲವಾಗಿ, ಹಿರಿಯ ಮಗನಿಗೆ ಕೋರ್ಟಿನಲ್ಲಿಯೆ ಒಂದು ನೋಕರಿ ಸಿಕ್ಕಿತು. ದೇವರು ಮೊರೆ ಕೇಳಿದನೆನ್ನುವಷ್ಟರಲ್ಲಿ ಮುಂದಿನ ವರುಷಕ್ಕೆ ಈ ಮಗನೂ ತೀರಿಕೊಂಡು ಬಿಟ್ಟ. ಅಷ್ಟರಲ್ಲಿ ಇವನ ತರುವಾಯದವ ಮೆಟ್ರಿಕ್‌ಪಾಸಾಗಿ ಪುಣೆಯಲ್ಲಿ ಪ್ರೀವ್ಹಿಯಸ್‌ದಲ್ಲಿ ಓದುತ್ತಿದ್ದ. ಅವನು ಆದನ್ನು ಬಿಟ್ಟು ಬಂದು ವಿಜಾಪುರದ ಒಂದು ಶಾಲೆಯಲ್ಲಿ ಇಪ್ಪತ್ತೈದು ರೂಪಾಯಿ ಸಂಬಳಕ್ಕೆ

ಶಿಕ್ಷಕನಾದ. ಇನ್ನೊಬ್ಬ ಪುಣೆಯಲ್ಲಿಯೇ ಒಂಬತ್ತು ರುಪಾಯಿಗೆ ಕಂಪೌಂಡರನಾದ. ಆದರೆ ಮುಂದೆ ವಿಜಾಪುರದಲ್ಲಿದ್ದವನು ತೀರಿ ಕೊಂಡುದರಿಂದ ಮನೆಜನರೆಲ್ಲ ಪುಣೆಗೆ ನಡೆದರು.

೧೮೮೯ನೆಯ ಮೇ ತಿಂಗಳಲ್ಲಿಯೆ ನಾರಾಯಣ ಹುಟ್ಟಿದ್ದ. ತಂದೆ ತೀರಿಕೊಂಡಾಗ್ಗೆ ಐದಾರು ವರುಷ ಇವನಿಗೆ. ಮನೆತನದ ಸ್ಥಿತಿ ತೀರ ಕೆಟ್ಟುದರಿಂದ ಇವನ ಶಿಕ್ಷಣದ ಕಡೆಗೆ ಯಾರು ಲಕ್ಷ ಕೊಡಬೇಕು ? ಹಾಗೂ ಹೀಗೂ ಧಾರವಾಡದಲ್ಲಿಯೆ ಪ್ರಾಥಮಿಕ ಶಿಕ್ಷಣ ಮುಗಿಸಿ ಮಾಧ್ಯಮಿಕ ಒಂದನೆಯ ವರ್ಗ ದಾಟಿದ. ವಿಜಾಪುರದಲ್ಲಿ ಎರಡನೆಯ ವರ್ಗ, ಪುಣೆಯಲ್ಲಿ ಮೂರು-ನಾಲ್ಕು ವರ್ಗಗಳಾದವು.

ಕಲಘಟಗಿಯ ಶೇವಡೆ ಮನೆತನದವರು ಹರಡೀಕರ ಮನೆತನಕ್ಕೆ ಸಂಬಂಧಿಕರು. ಸುಬ್ರಾಯ ಸತ್ತಮೇಲೆ ಅವನ ಕುಟುಂಬವನ್ನೆಲ್ಲ ಇವರೆ ಕೆಲವು ದಿನ ಹಿಡಿದಿದ್ದರು. ಇಲ್ಲಿರುವಾಗ ನಾರಾಯಣ ಕನ್ನಡ ಶಾಲೆ ಶಿಕ್ಷಣ ಪಡೆದ. ಇವನ ಉಪನಯನ ಸಂಸ್ಕಾರವೂ ಇಲ್ಲಿಯೇ ಆಯಿತು. ಈ ಶೇವಡೆ ಮನೆತನದೊಂದು ಕುಟುಂಬವು ಹುಬ್ಬಳ್ಳಿಯಲ್ಲಿ ನೆಲೆಸಿತ್ತು. ಆದರೊಡೆಯರೆ ಭಾವುರಾವ್ ಶೇವಡೆಯೆಂಬುವರು. ಇವರ ತಾಯಿ, ನಾರಾಯಣನ ತಾಯಿ ಒಂದೇ ಹೊಟ್ಟೆಯವರು. ಪುಣೆಯಲ್ಲಿ ನಾಲ್ಕನೆ ವರ್ಗವಾದೊಡನೆ ಇವನು ಹುಬ್ಬಳ್ಳಿಗೆ ಬಂದು ಐದನೆಯ ವರ್ಗಕ್ಕೆ ಹೆಸರು ಹಚ್ಚಿದ. ಆಗಿನಿಂದ ಈಗಿನವರೆಗೆ ಇವನು ಈ ಶೇವಡೆ ಯವರ ಮನೆಯಲ್ಲಿಯೆ ಮನೆಯವನಾಗಿ ಇದ್ದು ಬಿಟ್ಟಿರುವ. ಇವನ ತಾಯಿ ತೀರಿಕೊಂಡ ಮೇಲೆ ಶೇವಡೆ ರಾಮರಾಯರ ತಾಯಿಯವರಾದ ಉಮಾಬಾಯಿಯವರೇ ( ಭಾವುರಾಯರ ಹೆಂಡತಿ ) ನಾರಾಯಣನ ತಾಯಿಯಾಗಿರುವರು.

೧೯೦೬ನೆಯ ಇಸ್ವಿಯಲ್ಲಿ ಇವನು ಮೆಟ್ರಿಕ್ ಪರೀಕ್ಷೆ ಕಟ್ಟಿದ್ದ. ಇತಿಹಾಸ ಭೂಗೋಲುಗಳೆಂದರೆ ಒಳ್ಳೇ ಹುರುಪು. ಗಣಿತವೆಂದರೆ ಸ್ವಲ್ಪ ತಲೆನೋವು ಇವನಿಗೆ. ಗಣಿತದಲ್ಲಿ ಹಿಂದೆ ಬಿದ್ದು ದರಿಂದ ಪರೀಕ್ಷೆ ಇಳಿಯಲಿಲ್ಲ. ವರ್ತಮಾನ ಪತ್ರ ಓದುವ ರೂಢಿಯ ಮೂಲಕ ಮುಂದಿನ ಶಿಕ್ಷಣಕ್ಕೆ ಕಲಕತ್ತೆಯ ನ್ಯಾಷನಲ್ ಮೆಡಿಕಲ್

ಕಾಲೇಜಕ್ಕೆ ಹೋಗಬೇಕು, ಪರದೇಶಕ್ಕೆ ಹೋಗಬೇಕು, ಮುಂತಾದ ವಿಚಾರಗಳು ಇವನ ತಲೆಯಲ್ಲಿ ಬರುತ್ತಿದ್ದವು. ಒಮ್ಮೆ ತನ್ನ ವಿಚಾರ ವನ್ನೆಲ್ಲ ಭಾವುರಾಯರ ಮುಂದಿಟ್ಟ. ಅದಕ್ಕವರು “ ನಾನು ಅಲ್ಲಿ ಇಲ್ಲಿ ಹೊಗಲಿಕ್ಕೆ ಹಣಕೊಡುವುದಿಲ್ಲ. ಇಲ್ಲಿಯೆ ಕಲಿತು, ಮದುವೆಮಾಡಿ ಕೊಂಡು ಏನಾದರು ನೋಕರಿಮಾಡುತ್ತ ಇರಬೇಕು. ಇಲ್ಲವಾದರೆ ಸರಿ ಹೋಗದು ನೋಡೆಂ”ದರು.

ಅದೇ ಸಮಯಕ್ಕೆ ಶೇವಡೆ ಮನೆತನದವರೆ ಒಬ್ಬ ಮಾಮಲೆದಾರರು ಬಂದಿದ್ದರು. ಕೂಡಲೆ ಭಾವುರಾಯರು ನಾರಾಯಣನನ್ನು ಕರೆದು ಕೊಂಡು ಹೋಗಿ, ಬಡಹುಡುಗ–ಕುಟುಂಬವೆಲ್ಲ ಬಹಳ ಕಷ್ಟದಲ್ಲಿದೆ–ನೋಕರಿ ಮಾಡಿದ ಹೊರತು ಅವರ ಕಷ್ಟ ಹಿಂಗುವಂತಿಲ್ಲ–ಮುಂತಾಗಿ ಹೇಳಿ, ನೋಕರಿ ಕೊಡಬೇಕೆಂದು ಅವರ ಮುಂದೆ ನಿಲ್ಲಿಸಿದರು.

ನೋಕರಿ ! ನಾದ ಬ್ರಹ್ಮದ ಲೋಕದಲ್ಲೆಲ್ಲ ಓಂಕಾರವು ಝೇಂಕರಿಸುತಿದ್ದರೆ ಅನ್ನಬ್ರಹ್ಮದ ಲೋಕದಲ್ಲಿ ನೋಕರಿಯು ಮಾಂಕರಿಸುತಿದೆ ನಮ್ಮರವನೆಲ್ಲ. ಬ್ರಾಹ್ಮಣರು ಬಾಯ್ಬಿಟ್ಟು, ಮಾನಕ್ಕೆ ನೀರಿಟ್ಟು, ಧರ್ಮವನ್ನು ಬದಿಗೊತ್ತಿ, ನೋಕರಿಯ ಹಿಡಿದೆತ್ತಿ, ಜಪಿಸಿ ತಪಸು ಮಾಡಿದರೂ ಮೈದೋರುತಿಲ್ಲ ಆ ನೋಕರಿದೇವಿ. ಕಾಸಿಗಾಗಿ ಜಾತಿನೀತಿಗಳ ತೊರೆದರೂ ಕಾಸು ಸಿಗುವಂತಿಲ್ಲ, ಆಶೆ ಬಿಡುವಂತಿಲ್ಲ. ಹೀಗಿದೆ ಈಗಿನ ಸ್ಥಿತಿ. ಹಿಂದೆ ಜಾತಿ–ನೀತಿಗಳ, ಧರ್ಮ–ಕರ್ಮಗಳ, ಜಪ–ತಪಗಳ ಸುಳುವೆ ಇರಲಿಲ್ಲ. ಮಾಡುವೆನೆಂದು ಮನಸ್ಸು ಮಾಡಿದರೆ ನಡೆದು ಬರುತ್ತಿತ್ತು ನೋಕರಿ. ಅದಕಾಗಿ ಬ್ರಾಹ್ಮಣರು ಈಗಿನಷ್ಟು ತೊಂದರೆ ಪಡಬೇಕಾಗುತಿರಲಿಲ್ಲ. ಸರ್ಕಾರಕ್ಕೆ ಅವರು ಬಂದು ಅಧಿಕಾರ ವರ್ಗದಲ್ಲಿ ಸೇರಿದರೆ ಸಾಕಾಗಿತ್ತು. ನೋಕರಿ ಕೊಡುವೆವೆಂದು ಅಂಗಲಾಚಿದರೂ ಬೇಡುವ ಜನರಿರಲಿಲ್ಲ ಆಗ; ಮಾಡುವೆವೆಂದು ಮೊಳಕಾಲೂರಿದರೂ ಕೊಡುವವರಿಲ್ಲ ಈಗ. “ ಏನೋ ! ಚನ್ನಾದ ರೀತಿಯಿಂದ ಕೆಲಸ ಮಾಡುವಿಯಾ ?” ಎಂದರು ಮಾಮಲೆದಾರರು. **“ ಇಲ್ಲ, ನಾನು ನೋಕರಿ ಮಾಡಲು ಸರ್ವಥಾ ಸಿದ್ಧನಿಲ್ಲ. ಅದಕಾಗಿ ಹುಟ್ಟಿಲ್ಲ”** ವೆಂದು ಥಟ್ಟನೆ ಹೇಳಿಬಿಟ್ಟ ನಾರಾಯಣ.

ಪರಿಸ್ಥಿತಿಯು ನೌಕರಿಗೆ ಅನುಕೂಲ, ದೇಶಾಭಿಮಾನಕ್ಕೆ ಪ್ರತಿಕೂಲವಿದ್ದರೂ ಸ್ವಾಭಿಮಾನಿ ಸ್ವದೇಶಾಭಿಮಾನಿ ನಾರಾಯಣನು ನೌಕರಿಯನ್ನು ಕೀಳಾಗಿ ಎಳೆದ, ನಾಡನ್ನು ಮೇಲಾಗಿ ತಿಳಿದ. ದೇಶಾಭಿಮಾನದ ಬೀಜವಿದ್ದರೆ ಯಾವ ಪರಿಸ್ಥಿತಿಯು ಏನು ಮಾಡುವದು? ಎಂತಹ ಕಾಲದಲ್ಲಿಯೂ ಅದು ಮೊಳಕೆಯೊಡೆದು ಸಸಿಯಾಗಿ–ಗಿಡವಾಗಿ–ಬೆಳೆದು ಮರವಾಗಿ ನಿಂತು ಫಲವನೀಯಲೇಬೇಕಲ್ಲವೇ? ಬೀಜವಿದ್ದರೆ ಇದೆಲ್ಲ ಮಾತು. ಇಲ್ಲದಿದ್ದರೆ? ದೇಶಾಭಿಮಾನವು ನುಡಿ, ನಿರ್ಭಯದಿಂದ ಜನತೆಯು ಸ್ವಾತಂತ್ರ್ಯಕ್ಕೆ ಕಾದಾಡಿ, ರಾಷ್ಟ್ರವನ್ನು ಹೊಡೆದೆಬ್ಬಿಸುತ್ತಿದ್ದರೂ ಹೊಟ್ಟೆಗಾಗಿ ನಾಚಿಕೆ ಬಿಟ್ಟು ನೌಕರಿ ನೌಕರಿಯೆಂದು ತಿರುಗುವರ ಸ್ಥಿತಿಯೆತ್ತ? ಸ್ವಾತಂತ್ರ್ಯದ ಸುಳುವಿಲ್ಲದಾಗ ಕರೆದುಕೊಟ್ಟರೂ ದೇಶಾಭಿಮಾನದ ಹುಮ್ಮಸ್ಸಿನಿಂದ ನೌಕರಿಯನ್ನು ಕೀಳಾಗಿ ಎಳೆವ ಬಾಳೆತ್ತ? ಮನೆತನದ–ಬಡತನದ– ತನ್ನ ಪರಿಸ್ಥಿತಿಯು ತೀರ ಕರುಣಾಜನಕವಿದ್ದರೂ ಅದನ್ನು ಕನಸುಮನಸಿನಲ್ಲಿಯೂ ತರದೆ ಇವನು ನೌಕರಿ ಮಾಡಲೇ ಬಾರದೆಂದು ನಿಶ್ಚಯಿಸಿಬಿಟ್ಟ.

ಭಾವುರಾಯರು ಸಿಟ್ಟಿಗೆದ್ದರು. ಅಸಮಾಧಾನಪಟ್ಟರು. ಉಪಾಯವಿಲ್ಲೆಂದರು. ಕೊನೆಗೆ "ನಿನ್ನ ಮನಕೆ ಬಂದಂತೆ ಮಾಡು. ನಾನು ಏನನ್ನೂ ಹೇಳುವದಿಲ್ಲ" ಎಂದು ಬಿಟ್ಟರು. ಧೈರ್ಯದಿಂದ ದೇಶಾಭಿಮಾನದ ಹುಮ್ಮಸ್ಸಿನಲ್ಲಿ ನೌಕರಿ ಒಲ್ಲೆನೆಂದು ಹೇಳಿ ಬಿಟ್ಟನೇನೊ ಸರಿ. ಮುಂದೆ ಏನು ಮಾಡಬೇಕೆಂಬುದು ಇವನಿಗೆ ಹೊಳೆಯಲಿಲ್ಲ. ಅತ್ತ ನೌಕರಿ ಹೋಯಿತು. ಇತ್ತ ಮನೆಜನರಿಗೆ ಅಸಮಾಧಾನವಾಯಿತು. ಮಾಡುವದೇನು? ಆದರೂ ಇವನು ಕೈಕಾಲುಗೆಡಲಿಲ್ಲ. ನೌಕರಿಗಾಗಿ ನನ್ನ ಶಿಕ್ಷಣವಲ್ಲ, ಅದಕಾಗಿ ನಾನು ಹುಟ್ಟಿಲ್ಲ, ಹೇಗಾದರೂ ಮಾಡಿ ಮುಂದಿನ ಶಿಕ್ಷಣ ಪಡೆಯಬೇಕೆಂದು ವಿಚಾರ ಮಾಡುತ್ತ ಧೈರ್ಯವಂತನಾಗಿದ್ದ.

# ಪರದೇಶಕ್ಕೆ ಹೋಗುವ ಮೊದಲು.

ಇಂಗ್ಲೀಷು ಆರನೆಯ ವರ್ಗದಲ್ಲಿರುವಾಗ ನಾನಾರು, ನನ್ನ ನಾಡಾ
ವುದು ? ನಮ್ಮ ನಾಡಿಗರ ಪಾಡೇನು ? ನನಗೂ ನನ್ನ ನಾಡತಾಯಿಗೂ
ಸಂಬಂಧವೇನು ? ಮೊದಲಾದ ವಿಚಾರಗಳು ಎಷ್ಟು ಹುಡುಗರ ತಲೆಯಲ್ಲಿ
ಬರುತ್ತವೆ ? **ಕಲಿಸುವವರಲ್ಲಿದ್ದ ವಿಚಾರ ಕಲಿಯುತಕ್ಕವರಲ್ಲಿ.**
ಮೊಟ್ಟೆಹೊತ್ತಿಗೆಗಳನ್ನು ತಲೆಕೆಟ್ಟು ಹೋಗುವತನ, ಹೊಟ್ಟೆಪಾಡಿಗಾಗಿ
ಓದಿ ಬುದ್ಧಿವಂತರಾದ ಗುರುಗಳೇ ಹೆಚ್ಚು. ಇಂತಹ ಗುರುಗಳಿಂದ
ತಲೆಯಲ್ಲಿ ಬರತಕ್ಕುದೇನು ? ಹೊರಗಿನ ವಿದ್ಯೆಯನ್ನು ತುಂಬುವಷ್ಟರಲ್ಲಿ
ಒಳಗಿನದು ಹೊರಕ್ಕೆಯೆ. ಇದ್ದಬಿದ್ದ ಮೂಲ-ಸ್ವತಂತ್ರ ವಿಚಾರಗಳು
ಕಮರಿ, ಹುಟ್ಟು ಸ್ವಭಾವಗಳು ಮಾಯವಾಗಿ, ಹುಡುಗನು ಎಳೆತನ
ದಲ್ಲಿಯೇ ಪರತಂತ್ರನಾಗುವ. ಇಂತಹನಿಗೆ ಇನ್ನೆಲ್ಲಿಯ ಸ್ವತಂತ್ರ
ವಿಚಾರ ? ದೇಶ ! ಕೋಶ !! ಈಶ !!! ಇದೇನು ? " ಮೊದಲು ತನ್ನ ಹೊಟ್ಟೆ
ನಂತರ ನಾಡಿನ ಬಿಟ್ಟಿ " ಎಂಬ ವಿಚಾರಗಳೇ ಹೊರತು ತನ್ನ ನಾಡು-
ನುಡಿ-ಒಡೆಯನ ಕಲ್ಪನೆಗಳ ಗಾಳಿಕೂಡ ತಲೆಗೆ ತಟ್ಟದಂತೆ, ಜಾಗರೂಕ
ರಾಗಿರುವ ಗುರುಶಿಷ್ಯರೆ ಹೆಚ್ಚು. ಅದರಲ್ಲಿ ೧೯೦೫ನೆಯ ಇಸ್ವಿಯಲ್ಲಿ
ಯಂತು ಆರನೆಯ ವರ್ಗದ ಹುಡುಗರ ತಲೆಯಲ್ಲಿ, ಈ ತೆರದ ದೇಶಾಭಿಮಾ
ನದ ವಿಚಾರವೆಂದರೆ ಮಾರ್ಗಶಿರಮಾಸದಲ್ಲಿ ಮಾವಿನಹಣ್ಣು ಬೇಡಿದಂತಾ
ಗುತಿತ್ತು.

ಇದೀಗ ಬ್ರಿಟಿಷ್ ಸರಕಾರವು ಭರತಖಂಡದಲೆಲ್ಲ ದೊಂಬಿಗಳನ್ನು
ನಿರ್ಮೂಲಗೊಳಿಸಿ, ಸಂಸ್ಥಾನಿಕರನ್ನು ವಶಪಡಿಸಿ, ಜನರ ಮೇಲೆ ಅಧಿಕಾರ
ವನ್ನು ಕೂಡಿಸಿ, ತಾನು ಬಿತ್ತಿ ಬೆಳೆದ ಫಲವನ್ನು ಉಣ್ಣಲು ಕಾಲವಾ

ಗಿತ್ತು. ಜನಕೆಲ್ಲ ಬ್ರಿಟಿಷ್‌ಸರಕಾರವೆಂದರೆ ತಾಯಿತಂದೆ; ಧರ್ಮಕ್ಕೆ ರಾಮರಾಜ್ಯ; ಸುಖಕ್ಕೆ ದೇವರಾಜ್ಯ. ಇದರಲ್ಲಿ ಯಾವುದಾದರೊಂದು ನೋಕರಿ ಪಡೆದು ಬಿಟ್ಟರೆ ಮುಗಿದೆ ಹೋಯಿತು, ಅವನಿಗೆ ಸ್ವರ್ಗ ಬೇಕಿಲ್ಲ. ಇಂತಿರುವಲ್ಲಿ ನಮ್ಮ ನಾಡು ಪರತಂತ್ರವಾಗಿದೆ; ನಾನು ಗುಲಾಮನಾಗತೊಡಗಿರುವೆ; ಪರನಾಡುಗಳಂತೆ ನಮ್ಮ ನಾಡು ಸ್ವತಂತ್ರವಾಗ ಬೇಕು; ಅದಕ್ಕಾಗಿ ನನ್ನಬಾಳು, ಅದಕ್ಕಾಗಿ ನನ್ನ ವಿದ್ಯೆ, ಅದಕ್ಕಾಗಿ ವ್ಮೈ ಮಾತು ಮನಗಳಿಂದ ಹಗಲಿರುಳು ದುಡಿಯಬೇಕೆಂದು ಯಾರಿಗೆ ಹೊಳೆಯಬೇಕು? ಸ್ವದೇಶ– ಸ್ವರಾಜ್ಯವೆಂದು ತಲೆಯಲ್ಲಿ ಕಲ್ಪನೆ ಬರುವುದೇ ಸಾಧ್ಯವಿರಲಿಲ್ಲ. ಬಂದರೂ ಆ ಶಬ್ದಗಳನ್ನು ಉಚ್ಚರಿಸುವ ಧೈರ್ಯವಿರಲಿಲ್ಲ. ಮನದಲ್ಲಿ ಉಚ್ಚರಿಸಿದರೂ ಜನದಲ್ಲಿ ಕೃತಿಗಿಳಿಸುವದು ಕಠಿಣವಾಗಿತ್ತು. ಮಾಬಾಪ್ ಸರಕಾರದ ವಿರುದ್ಧ ಕಲ್ಪನೆ ಮಾಡುವ ಕಲ್ಪನೆ ಕೂಡ ಬರದಾಗ ಎಲ್ಲಿಯ ದೇಶ ಎಲ್ಲಿಯ ಕೋಶ! ಈಗಿನಂತೆ ಭಾರತರಾಷ್ಟ್ರವನ್ನು ಬ್ರಿಟಿಷ್‌ಸಾಮ್ರಾಜ್ಯದ ತೊಡಕಿನಿಂದ ಬಿಡಿಸಿ, ಸ್ವತಂತ್ರ ಭಾರತದ ಜಯಭೇರಿಯನ್ನು ಹೊಡೆವುದೆ ನಮ್ಮ ಗುರಿಯೆಂದು ಕೂಸು ಕುನ್ನಿಗಳು ಜಾಹೀರವಾಗಿ ಹೇಳುತಿರಲಿಲ್ಲ ಆಗ. 'ವಂದೇಮಾತರಂ' ಎಂದು ಗುಂಯ್‌ಗುಟ್ಟಿದರೆ ಸಿದ್ಧವಿರುತಿತ್ತು ಜೇಲು. ಲೋಕಮಾನ್ಯರಂತಹ ಉತ್ಕಟ ದೇಶಾಭಿಮಾನಿಗಳು, ಪರಿಸ್ಥಿತಿಯು ಪರಿಪೂರ್ಣವಾಗಿ ವಿರುದ್ಧವಾಗಿದ್ದರೂ ತಮ್ಮ ಸ್ವಾಭಿಮಾನ ಸ್ವದೇಶಾಭಿಮಾನಗಳಿಂದ ಜನರನ್ನು ಜಾಗ್ರುತೆಗೊಳಿಸಲು ಹಗಲಿರುಳು ಯತ್ನಮಾಡುತ್ತಿದ್ದರೂ ಭಾರತ ಸಿಂಹವು ಮಿಸುಕುತಿರಲಿಲ್ಲ. ಇಂತಹ ಕಾಲದಲ್ಲಿ ತನ್ನ ರಾಷ್ಟ್ರದ ವಿಷಯಕ್ಕೆ ವಿಚಾರತರುವ, ವಿಚಾರವೇಕೆ ಆಚಾರಕ್ಕಿಳಿಸುವ ಭಾರತಪುತ್ರನಿಗೆ ಅದಾವನು ಬೊಟ್ಟು ಕಚ್ಚಲಾರ!

೧೯೦೫ ನೆಯ ಇಸ್ವಿಯಲ್ಲಿ ನಾರಾಯಣನು ಓದುತಿದ್ದುದು ಹುಬ್ಬಳ್ಳಿಯ ಲ್ಯಾಮಿಂಗಟನ್ ಹಾಯಸ್ಕೂಲಿನ ಆರನೆ ವರ್ಗದಲ್ಲಿ; ಶಾಲೆಯಲ್ಲಿ ಯಾವ ಗುರುವಾಗಲಿ–ಪಾಠವಾಗಲಿ ಅವನಿಗೆ ಬೇಕಾದುದನ್ನು ಪೂರೈಸುತಿರಲಿಲ್ಲ. ಚಿಕ್ಕಂದಿನಲ್ಲಿಯೆ ಗಣಪತಿ ಮೇಳೆ ಮೊದಲಾದ ಸಾರ್ವಜನಿಕ ಉತ್ಸವಗಳಲ್ಲಿ ಹುರುಪಿನಿಂದ ಸೇರಿ ಕೆಲಸಮಾಡಿದ ಬಾಲಕನಿಗೆ, ಬೇಕಾ

ದುದನ್ನು ಬೇಡಾದುದನ್ನು ತಲೆಯಲ್ಲಿ ತುಂಬಿಕೊಳ್ಳುತ್ತ ಅಭ್ಯಾಸ ಮಾಡುವದು ಬೇಸರಾಗಿತ್ತು. ಈಗಂತೂ ಹದಿನಾರು ವರುಷದ ಪ್ರಾಯದವ. ತಲೆಯಲ್ಲಿ ಪಕ್ವವಿಚಾರಗಳಿಲ್ಲದಿದ್ದರೂ ಮೈಯಲ್ಲಿ ತಾರುಣ್ಯವು ತಲೆದೋರಿತ್ತು—ಉತ್ಸಾಹವು ಉಕ್ಕುತಿತ್ತು. ಒಳಗಿನ ಸ್ವಾಭಿಮಾನ ಸ್ವದೇಶಾಭಿಮಾನಗಳು ಹೊರಹೊಮ್ಮಲು ಕಾಲವಾಗಿತ್ತು. ಸರಿ. ಹೊತ್ತಿಗೆ ಸರಿಯಾಗಿ ಮಳೆಯಾದಂತೆ, ಈ ಸುಮಾರಿಗೆ ಹಿಂದುಸ್ಥಾನ ಸರಕಾರವು ಬಂಗಾಲವನ್ನು ಇಬ್ಭಾಗವಾಗಿ ಮಾಡಿತು. ಈ ವಂಗ ಭಂಗದಿಂದ ಭರತಖಂಡದ ಜನರಿಗೆಲ್ಲ ಅಸಮಾಧಾನವಾಗಿ, ಬಂಗಾಲದಲ್ಲಿ ಅದರ ಪ್ರತೀಕಾರವು ಒಳ್ಳೇ ರಭಸದಿಂದ ಪ್ರಾರಂಭವಾಯಿತು. ಅದನ್ನೇ ಎತ್ತಿ ಹಿಡಿದು ಹಿಂದುಸ್ಥಾನದ ಉಳಿದೆಲ್ಲ ಮುಖಂಡರು, ದೇಶದಲ್ಲೆಲ್ಲ **ಸ್ವದೇಶಿ ಪ್ರಸಾರ ಪರದೇಶಿ ಬಹಿಷ್ಕಾರದ** ವಿಚಾರವನ್ನು ಒತ್ತಿ ಹೇಳತೊಡಗಿದರು. ಸೇವಕನಿಗೆ ಬೇಕಾದದ್ದೇನು ? ಸ್ವಾಮಿಯ ಅಲ್ಲವೇ ? ಸ್ವದೇಶವೆಂದರೆ ದಾಸನಾಗಲು ಹುರಿಗೊಳ್ಳುತಿದ್ದ ಇವನಿಗೆ ವಂಗ ಭಂಗವು ಈಶನಾಗಿ ಬಂದಿತು. ಕೂಡಲೆ ಆ ಅಂದೋಲನದಲ್ಲಿ ಧುಮುಕಿದ. ಹೀಗೆ ಮಾಡಬೇಕು—ಮಾಡಬಾರದೆಂದು ಹೇಳಿ ನಾಡಸೇವೆ ಮಾಡಿಸುವ ಮುಂದಾಳುವು ಅವನಿಗಿರಲಿಲ್ಲ. ಹದಿನಾರು ವರುಷದ ಹುಡುಗ; ಕಲಿಯುತ್ತಿದ್ದುದು ಆರನೆಯ ವರ್ಗದಲ್ಲಿ. ಇಂತಹ ಕಾಲದಲ್ಲಿ ಕೈಕೊಂಡಕಾರ್ಯದ ವಿಷಯಕ್ಕೆ ಪರಿಪೂರ್ಣ ವಿಚಾರ ಬರುವುದೆಂತು ? ಮುದುಕರಾದರೂ ತಿಳಿಯದ—ರುಚಿಸದ ರಾಜಕಾರಣವು ಈ ಚಿಕ್ಕ ಹುಡುಗನಿಗೆ ಹೇಗೆ ತಿಳಿಯಬೇಕು ? ಜಗದ ಅನುಭವವು ಹೇಗೆ ಬರಬೇಕು ? ಇತ್ತ ಮಾರ್ಗ ತೋರಿಸಲು ಮುಂದಾಳಾಗಿ ಬರುವವರಾರೂ ಹುಬ್ಬಳ್ಳಿಯಲ್ಲಿ ಆ ಕಾಲಕ್ಕೆ ಇರಲಿಲ್ಲ. ಇವರ ಸುತ್ತುಮುತ್ತು ಇರುವವರೆಲ್ಲ ಬರೀ ಹುಡುಗರೇ. ತಾನೂ ಹುಡುಗ, ಸಂಗಡಿಗರೂ ಹುಡುಗರು. ಇನ್ನೇನು ಮಾಡುವುದೆಂದು ಇವನಿಗೆ ಕೊಂಚ ದಿಗಿಲು ಬಿತ್ತು. ಕೂಡಲೆ ಸರ್ವ ಗುಣಗಳುಳ್ಳ, ಮಾನ್ಯ ಮುಂದಾಳುವು ಸಿಗುವವರೆಗೆ ಸುಮ್ಮನೆ ಕುಳಿತು ಉಪಯೋಗವಿಲ್ಲ; ಕೆಲಸ ಮಾಡಹತ್ತಿದರೆ ಮಾರ್ಗವು ತಾನೆ ಹೊಳೆವುದು; ತಪ್ಪಿದರೆ ತಿದ್ದಿಕೊಳ್ಳೋಣ, ಒಪ್ಪಿದರೆ ಸರಿಹೋಯಿತು; **ಬರುವ ಕಾಲಕ್ಕೆ**

**ಮುಂದಾಳುವು ಬಂದೇ ಬರುವ; ಇಲ್ಲವಾದರೆ ನಮಗೆ ನಮ್ಮ ಅನುಭವವೇ ಮುಂದಾಳಾಗಿ** ಪರಿಣಮಿಸಬಹುದೆಂದು ಕಾರ್ಯಕ್ಕೆ ಕೈಹಾಕಿಯೆ ಬಿಟ್ಟ. ರಾಜನಿದ್ದರೆ ಭೋಜನದ ಕೊರತೆಯೆ! ಸಿರಿ ಇದ್ದರೆ ಹಿರಿತನ ಬರದೆ! ಸಾಹಸವಿದ್ದರೆ ಯಾವುದು ಅಸಾಧ್ಯ! **ಸಾಹಸಿಗೆ ಸಲಹೆ ತಾನೇ ಸ್ಫುರಣವಾಗುವುದು; ಪರಿಸ್ಥಿತಿಯು ಮಾರ್ಗ ತೋಡುವುದು; ಸಹಾಯವು ಎಲ್ಲಿಂದಲೂ ಬರುವುದು.** ಬೀಜರೂಪವಾಗಿದ್ದ ಈ ಅಪ್ರತಿಮ ಸಾಹಸಗುಣವೇ ಸ್ವಯಂಸೇವಕ ನಾರಾಯಣನನ್ನು ಇಂದು ಸೇನಾಪತಿಯನ್ನಾಗಿ ಮಾಡಿತು. ಹತ್ತಿರವಿದ್ದು ಹೇಳಿ ಮಾಡಿಸುವ ಮುಂದಾಳುವು ಇರದಿದ್ದರೂ ವರ್ತಮಾನ ಪತ್ರಗಳಿಂದ ಇವನು ಕೆಲವೊಂದು ಸಲಹೆ ತಕ್ಕೊಳ್ಳುತ್ತಿದ್ದ.

ಲೋಕಮಾನ್ಯರೆಂದರೆ ಇವನಮೈ ಉಬ್ಬುತ್ತಿತ್ತು. ಅವರು ಹೊರಡಿಸಿದ ಕೇಸರಿ ವರ್ತಮಾನ ಪತ್ರವೇ ಇವನ ಮುಂದಾಳಾಯಿತು. ತನಗೆ ಬೇಕಾದ ಸಲಹೆಗಳನ್ನೆಲ್ಲ ಆ ಸಾಪ್ತಾಹಿಕ ಮುಂದಾಳುವಿನಿಂದಲೇ ಪಡೆಯುತ್ತಿದ್ದ. ಪ್ರತಿವಾರವು ಕೇಸರಿ ಪತ್ರವನ್ನು ಪಾರಾಯಣ ಮಾಡುವುದಲ್ಲದೆ "ಕಾಳ" "ವಿಹಾರ" "ಭಾಲಾ" ಮುಂತಾದ ವರ್ತಮಾನ ಪತ್ರಗಳನ್ನು ಓದುತ್ತಿದ್ದ. ಈ ರೀತಿಯಾಗಿ ಲೋಕಮಾನ್ಯರು ಪರಮ ಗುರುಗಳು; ಕೇಸರಿ ಪತ್ರವು ಮುಂದಾಳು; ಈ ತರುಣ ಸ್ವಯಂಸೇವಕನು ಹುಡುಗರನ್ನು ಕೂಡಿಕೊಂಡು ಕಾರ್ಯಮಾಡುವವನು. ನಡೆಯಿತು ಬುದ್ಧಿಗೆ ತಿಳಿದಂತೆ ಮನಕ್ಕೆ ಹೊಳೆದಂತೆ ಕಾರ್ಯಕ್ರಮ. ಬಿಕ್ಕಟ್ಟಿನ ಪ್ರಸಂಗದಲ್ಲಿ ಸಮಾಲೋಚಕ (ಮರಾಠಿ) ಮಾಸಿಕ ಸಂಪಾದಕರು, **ಪ್ರೊಫೆಸರ ಪಾಠಕ** ಇವರ ಅಳಿಯಂದಿರಾದ **ತ್ರ್ಯಂಬಕ ಗುರುನಾಥ ಕಾಳೀಯವರು,** ಧಾರವಾಡದ ಬೇವೂರ ಭೀಮರಾಯರ ಸೋದರ ಮಾವಂದಿರಾದ **ತಾಳಪದಟೂರ ಹನುಮಂತರಾಯರು, ಡಾ|| ದೇವಧರರು** ಈ ಹುಡುಗರಿಗೆ ನೆರವಾಗುತಿದ್ದರು. ಇವನ ದಿನದ ಕಾರ್ಯಕ್ರಮವೆಂದರೆ ಸರಿಯಾಗಿ ನಾಲ್ಕು ಗಂಟೆಗೆ ಏಳುವುದು ಸಹಕಾರಿಗಳನ್ನೆಲ್ಲ ಎಬ್ಬಿಸುವದು. ಮುಂದೆ ಮುಂದೆ ದುರ್ಗದ ಬೈಲಿನಲ್ಲಿ (ಹುಬ್ಬಳ್ಳಿಯಲ್ಲಿ ನಾಲ್ಕುದಾರಿಗಳು ಕೂಡಿದ ಮುಖ್ಯಸ್ಥಳ) ತುತೂರಿ

(ಬ್ಯೂಗಲ್) ಯನ್ನೂದಿದ ಕೂಡಲೆ ಎಲ್ಲ ಸಂಗಡಿಗರೂ ಸೇರಬೇಕೆಂದು ನಿಶ್ಚಯ ಮಾಡಿ, ಅದರಂತೆ ಎಲ್ಲರು ಐದು ಗಂಟೆಗೆ ಕೂಡುತಿದ್ದರು. ಕೂಡಿ ಲ್ಯಾಮಿಂಗಟನ್ ಹಾಯಸ್ಕೂಲಿನ ಬೈಲಿಗೆ ಓಡುತ್ತ ಹೋಗುವುದು; ಅಲ್ಲಿ ತಿಳ್ಳಿ, ಕವಾಯಿತು ಮುಗಿದ ಬಳಿಕ ಗೌಳಿಗರ ಮನೆಗೆ ಹೋಗಿ, ಹಾಲು ಕುಡಿದು ತಮ್ಮತಮ್ಮ ಅಭ್ಯಾಸಕ್ಕೆ ಹೋಗುತ್ತಿದ್ದರು. ಸಂಜೆಯ ಮುಂದೆ ಎಲ್ಲರು ಕೂಡಿ ವೃತ್ತಪತ್ರ ಓದುವದು; ವ್ಯಾಯಾಮ ಮಾಡುವದನ್ನು ಮುಗಿಸಿಕೊಂಡು ಮನೆಗೆ ತೆರಳುತಿದ್ದರು. ವಕ್ತೃತ್ವ ಸಭೆಯನ್ನೊಂದು ಮಾಡಿಕೊಂಡು ಭಾಷಣ ಮಾಡುವದನ್ನು ಕಲಿಯುತಿದ್ದರು.

ನಾರಾಯಣನು ಮಾತ್ರ ಇಷ್ಟುಮಾಡಿ ಸುಮ್ಮನೆ ಶಾಲೆಗೆ ಹೋಗುತಿರಲಿಲ್ಲ. ವಂಗಭಂಗದ ವ್ರತವನ್ನು ಕೈಕೊಂಡುದರಿಂದ ಬಿಡುವಿನಲ್ಲಿ ಸೆರೆಸಿಂದಿ ಅಂಗಡಿಗಳ ಮುಂದೆ ಕಾವಲು ಮಾಡುವದು; ಸ್ವದೇಶಿ ವಸ್ತುಗಳನ್ನು ಮನೆಮನೆಗೆ ಹೋಗಿ ಮಾರುವದು; ಅಲ್ಲದೆ ಊರಲ್ಲೆಲ್ಲ ನಾಲ್ಕುದಾರಿ ಕೂಡಿದ ಸ್ಥಳದಲ್ಲಿ ನಿಂತು, ಸ್ವದೇಶಿ ವಿಷಯಕ್ಕೆ ಭಾಷಣ ಮಾಡುತಿದ್ದ. ಹಳ್ಳಿ-ಪಟ್ಟಣ-ಜಿಲ್ಹಾ ಸ್ಥಳಗಳಲ್ಲೆಲ್ಲ ಸಭೆ ಸೇರಿಸಿ, ಸಂತೆ-ಜಾತ್ರೆಗಳಲ್ಲೆಲ್ಲ ನಿಂತುಕೊಂಡು, ಸ್ವದೇಶಿ ಪ್ರಚಾರ, ಪರದೇಶಿ ಬಹಿಷ್ಕಾರದ ಮೇಲೆ ವ್ಯಾಖ್ಯಾನಗಳನ್ನು ಸುರಿಸುತಿದ್ದ. ವಿಷಯವೆಲ್ಲ ವರ್ತಮಾನ ಪತ್ರದಲ್ಲಿಯದೆ. ಒಂದೊಂದು ಸಲ ವೃತ್ತಪತ್ರಗಳಲ್ಲಿ ಸುಂದರವಾಗಿ ಮಾರ್ಮಿಕವಾಗಿದ್ದುದನ್ನು ಪಾಠಮಾಡಿ ಹೇಳುತ್ತಿದ್ದ. ಇಲ್ಲವೆ ಅದನ್ನು ಓದಿ ಬಿಡುತ್ತಿದ್ದ. ಇವೆಲ್ಲ ಕಾರ್ಯಗಳು ಹದಿನಾರು ವರುಷದ ಹುಡುಗನ ಯೋಗ್ಯತೆಯ ಮೀರಿದ ಹೊಣೆಗಾರಿಕೆಯ ಕಾರ್ಯಗಳಾಗಿದ್ದವು. ಆದರೂ ಸಾಹಸತನ, ಕಷ್ಟ ಸಹಿಷ್ಣುತೆ, ದೇಶಾಭಿಮಾನದ ಹುಮ್ಮಸ್ಸು ಅವನನ್ನು ಹಿಡಿದ ಕಾರ್ಯದಿಂದ ಬಿಡಿಸದೆ ಈಡೇರಿಸಿಯೆ ಬಿಡುತ್ತಿದ್ದವು. ತಪ್ಪುಗಳು ಎಷ್ಟೇ ಈ ಕಾರ್ಯಗಳಲ್ಲಿರುತ್ತಿದ್ದರೂ ಅವುಗಳನ್ನೆಲ್ಲ ಕೂಡಲೆ ತಿದ್ದಿಕೊಳ್ಳಲು ನಾರಾಯಣನು ಎಚ್ಚರಪಡುತ್ತಿದ್ದ. **ತಪ್ಪು ಆ ತಪ್ಪು-ಒಪ್ಪುಗಳಿಂದಾದ ಅನುಭವವೆ**

**ಇವನಿಗೆ ಮಾರ್ಗದರ್ಶಕವಾಯಿತು.** ಅದರ ಫಲವೆ ಇವನನ್ನು ಅಚ್ಚುಕಟ್ಟಿನ ಮನುಷ್ಯನನ್ನಾಗಿ ಮಾಡಿತು.

೧೯೦೬ನೆ ಇಸ್ವಿಯಲ್ಲಿ **ಆರ್ಯಬಾಲ ಸಭೆ** ಎಂಬ ಸಂಸ್ಥೆಯನ್ನು ಸ್ಥಾಪಿಸಿದ. ಇವನಿಗೆ ಸಹಾಯಕರಾಗಿ ಬಂದವರು ಸದ್ಯಕ್ಕೆ ಧಾರವಾಡದಲ್ಲಿರುವ **ಬೀವೂರ ಭೀಮರಾಯರು.** ಇಬ್ಬರು ಈ ಸಂಸ್ಥೆಯಿಂದ ಒಂದು ವಾಚನಾಲಯವನ್ನು ತೆರೆದರು. ಅದಕ್ಕೆ ಬೇಕಾಗುವ ವೃತ್ತ ಪತ್ರ ಮಾಸಿಕಗಳನ್ನು ಊರಲ್ಲಿಯ ಸದ್ಗೃಹಸ್ಥರಿಂದ ಕೂಡಿ ಹಾಕುತಿದ್ದರು. ವ್ಯಾಯಾಮವೆಂದರೆ ಹುರುಪುಗೊಳ್ಳುವ ನಾರಾಯಣನಿಗೆ ಇಷ್ಟರಿಂದ ಸಮಾಧಾನವಾಗಲಿಲ್ಲ. ಕೂಡಲೆ ಊರಲ್ಲಿ ಮೂರು ವ್ಯಾಯಾಮ ಶಾಲೆಗಳನ್ನು ತೆರೆದ. ಒಟ್ಟು ಸಂಸ್ಥೆಗಳು ಐದಾದವು. ಇವೆಲ್ಲ ಸುರಕ್ಷಿತ ಸಾಗಲು ಹಣವೆಲ್ಲಿಂದ ಒರಬೇಕು? ವಿಚಾರಮಾಡಿ ಬಗಲಿಗೆ ಹಾಕಿದ ಜೋಳಿಗೆ. ಹೊರಟ ಮನೆ ಮನೆಗೆ ಭಿಕ್ಷೆಗಾಗಿ. ಮುಷ್ಟಿ ಫಂಡುಕೂಡಿಸಿ ಸಂಸ್ಥೆಗಳನ್ನು ಸಾಗಿಸ ತೊಡಗಿದ. ವ್ಯಾಯಾಮ ಪದ್ಧತಿಯನ್ನು ಹೊಸರೀತಿಯಿಂದ ಕಲಿಸುವದು ಅವಶ್ಯವಾಗಿತ್ತು. ಅದಕ್ಕಾಗಿ ಬಡೋದೆಯಿಂದ ಒಬ್ಬ ಜಟ್ಟಿಯನ್ನು ಕರೆತಂದ. ಕರೆತಂದುದೇನೊ ಸರಿ, ಮುಂದೆ ಅವನ ಸಂಬಳದ ವಿಚಾರ ಬಾಧಿಸಹತ್ತಿತು. ಮುಷ್ಟಿ ಫಂಡಿನ ಹಣದಿಂದ ಇಷ್ಟೆಲ್ಲ ವೆಚ್ಚವು ಹೇಗೆ ಸಾಗಬೇಕು? ದೈವಯೋಗದಿಂದ ಆ ಜಟ್ಟಿಯಲ್ಲಿ ಜನರಿಗೆ ಸಂದು ತಪ್ಪಿದರೆ, ಎಲವು ಮುರಿದರೆ ಸರಿಪಡಿಸುವ ಕೌಶಲವಿತ್ತು. ಉದಾರ ಮನಸ್ಸಿನಿಂದ ಅವನು ವ್ಯಾಯಾಮಶಾಲೆಯಿಂದ ಕಡಿಮೆ ಸಂಬಳ ತಕ್ಕೊಂಡು ತನ್ನ ಉದ್ಯೋಗದಿಂದ ಹೊಟ್ಟೆ ತುಂಬಿಕೊಳ್ಳತೊಡಗಿದ.

ಇತ್ತ ಪ್ರತಿವರ್ಷ ಹುಬ್ಬಳ್ಳಿ-ಕಲಘಟಿಗೆಯಲ್ಲಿ ಶಿವಾಜಿ ಉತ್ಸವವನ್ನು ಪ್ರಾರಂಭಿಸಿದ. ವ್ಯಾಯಾಮವೆಂದರೆ ಇವನಿಗೆ ಒಳ್ಳೇ ಪ್ರೀತಿಯ ವಿಷಯವಾದ್ದರಿಂದ ಧಾರವಾಡದ ಶ್ರೀಮಾನ್ ಆಲೂರ ವೆಂಕಟರಾಯರು ಹಾಗು ನಾ. ಶ್ರೀ. ರಾಜಪುರೋಹಿತರು ವಂಗ-ಭಂಗದ ವೇಳೆಯಲ್ಲಿ ತೆರೆದ, '**ಕರ್ನಾಟಕ ನೂತನ ವಿದ್ಯಾಲಯ**'ದ ಶಾರೀರಕ ಶಿಕ್ಷಣದ ಕಾರ್ಯದಲ್ಲಿ ನೆರವಾಗುತ್ತಿದ್ದ. ಇದಲ್ಲದೆ ಶಾಲೆಯಲ್ಲಿ,ಮನೆಯಲ್ಲಿ

ಸಣ್ಣ ಸ್ವದೇಶಿ ಅಂಗಡಿಯನ್ನು ತೆರೆದು ಪೆನ್ಸಿಲ್-ಹಾಳೆ-ಟಾಕು ಮೊದಲಾದವುಗಳನ್ನು ಮಾರಲು ಇಡುತ್ತಿದ್ದ. ಮುಂದೆ ಅಂಗಡಿಗಳನ್ನು ನಡೆಸುವರ ಸಹಾಯದಿಂದ ಸ್ವಲ್ಪ ದೊಡ್ಡ ಪ್ರಮಾಣವಾಗಿ ಬೆಳೆಸಿದ.

ಸಾರ್ವಜನಿಕ ಕೆಲಸ ಮಾಡುವದರಲ್ಲಿ ಇವನು ಎಂದೂ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಹೊಟ್ಟೆಯ ಪರಿವೆಯಿಲ್ಲದೆ, ಜೀವದ ಆಶೆಯಿಲ್ಲದೆ ನುಗ್ಗಿ ಬಿಡುತ್ತಿದ್ದ. ಒಮ್ಮೆ ಹುಬ್ಬಳ್ಳಿಯ ಮಾರ್ಕೆಟ್ಟಿಗೆ ಬೆಂಕಿಹತ್ತಿತು. ಒಳಗಿನ ಸರಕೆಲ್ಲ ಸುಟ್ಟು ನೂರೆಯಾಗಹತ್ತಿತು. ಊರ ಲ್ಲೆಲ್ಲ ಹಾಹಾಕಾರವುಂಟಾಯಿತು. ಕೂಡಲೇ ಇವನು ಧೈರ್ಯಸಾಹಸ ದಿಂದ ಒಳನುಗ್ಗಿ, ಸರಕುಗಳನ್ನು ಹಿರಿದೊಗೆಯತೊಡಗಿದ. ಈ ಕಾರ್ಯ ದಲ್ಲಿ ಇವನ ಸಾಹಸ-ಧೈರ್ಯಗಳನ್ನು ಊರೆ ಕೊಂಡಾಡಿತು.

ಒಮ್ಮೆ ಪೈಸಾಫಂಡಿನವರಿಗೆ ಸಹಾಯ ಮಾಡಬೇಕೆಂದು ಲೋಕ ಮಾನ್ಯರು ಒಂದು ಲೇಖ ಬರೆದರು. ಸರಿ. ಗುರ್ವಾಜ್ಞೆಯೆಂದು ಶಿಷ್ಯನು ಹಣಕೂಡಿಸಲು ಟೊಂಕಕಟ್ಟಿದ. ಒಂದು ರೇಷ್ಮೆಮುಡಿಯ ನುಟ್ಟು, ಹಣೆಗೆ ಥಾಳಾಗಿ ಗಂಧವನಿಟ್ಟು, ಕೈಯಲ್ಲಿ ಒಂದು ಥಾಲಿ ಯನ್ನು ಹಿಡಿದು, ಮುಂಜಿ, ಮದುವೆ, ಊಟ, ಸಮಾರಾಧನೆಯಾಗು ವಲ್ಲೆಲ್ಲ ನಾರಾಯಣನು ಸಿದ್ಧನಾಗಿರುತ್ತಿದ್ದ. ದಕ್ಷಿಣೆಕೊಡಲು ಪ್ರಾರಂಭಿಸಿದ ಕೂಡಲೆ ಅವರ ಹಿಂದಿನಿಂದ ಪ್ರಾರಂಭವೇ ಇವನ ಭಿಕ್ಷೆ. ಜನರು ಒಂದು ದಿನ, ಎರಡು ದಿನ ನೋಡಿದರು; ಒಂದು ಸಲ, ಎರಡು ಸಲ ಕೈಬಿಟ್ಟುಕೊಟ್ಟರು; ಬರಬರುತ್ತ ಪ್ರತಿಯೊಂದು ಕಡೆಯಲ್ಲಿಯೂ ಇವನ ದರ್ಶನವಾಗಹತ್ತಲು, "ಇದೇನು ಬೆನ್ನು ಹತ್ತೆಪಾ ಧನ ಪಿಶಾಚಿ, ಕಂಡಕಂಡಲ್ಲೆಲ್ಲ ಅಂಡಲೆಯುತಿದೆ." ಎಂದು ಬೇಜಾರ ಪಟ್ಟುಕೊಳ್ಳಹತ್ತಿದರು. ಕೆಲವರು ತೆಗಳಿದರು; ಹಲವರು ಹೊಗಳಿದರು; ಮತ್ತೆ ಕೆಲವರು ಬೈದುಕೊಂಡರೆ, ಇನ್ನಿತರರು ಬೆದರಿಸಿದರು. ಎಲ್ಲರೂ ಏನು ಮಾಡುವದನ್ನೆಲ್ಲ ಮಾಡಿದರು. ಇಷ್ಟಾದರೂ ಹೊಗಳಿದವರು ತೆಗಳಿದವರು ನಮ್ಮವರೇ; ಕೊಟ್ಟವರು ನಮ್ಮವರೆ, ಕೊಡದವರು ನಮ್ಮವರೆ ಎಂದು ಇವನು ಯಾವ ಮಾತಿಗೂ ಮನಸ್ಸಿನಲ್ಲಿ ನೊಂದು ಕೊಳ್ಳದೆ, ನಾಚಿಕೆಪಟ್ಟು ಹಿಂಜರಿಯದೆ, ಮೈ ಸಡಿಲು ಬಿಟ್ಟು ಹಿಡಿದ

ಕಾರ್ಯ ಬಿಡದೆ ಮಾಡುತಿದ್ದ. ಇಷ್ಟು ಕಷ್ಟಪಟ್ಟು ಕೈಲಾದಷ್ಟು ಕೂಡಿಸಿದ ಹಣವನ್ನು ಕೇಸರಿಯ ಆಫೀಸಿಗೆ ಕಳಿಸಿ ಬಿಡುತ್ತಿದ್ದ. ಈ ರೀತಿಯಾಗಿ ಹಣಕೂಡಿಸಲು ಬೇಕಾದ ಸಮತಾಗುಣ-ಸಹಸಶೀಲತೆ-ಸಾಹಸ-ಧೈರ್ಯೋತ್ಸಾಹಗಳೆ ಇಂದು ಇಡೀ ಭರತಖಂಡದಲ್ಲೆಲ್ಲ ನೂರಾರು ಶಿಬಿರಗಳನ್ನು ತೆರೆದು ಸಾವಿರಾರು ತರುಣರಿಗೆ ಸೈನಿಕ ಶಿಕ್ಷಣವನ್ನು ಕೊಡಲು ವೆಚ್ಚಮಾಡುವ ಹಣಕೂಡಿಸುವದಕ್ಕೆ ಅಣಿಮಾಡಿವೆ ಡಾ. ಹರಡೀಕರರನ್ನು. **ಅಂಗಾಲಿಗೆ ಹೇಸಿಗೆ ಇಲ್ಲವಾದರೆ ಹಣ ಬೇಡಲು ನಾಚಿಕೆಯಿಲ್ಲ ಇವರಿಗೆ.**

ಶಾಲೆಯಲ್ಲಿರುವಾಗಲೆ ಈ ರೀತಿಯಾಗಿ ದೇಶಸೇವೆಗೆ ನಿಂತು ಕೆಲಸ ಮಾಡುತಿದ್ದುದು ಅಭ್ಯಾಸಕ್ಕೆ ತೊಂದರೆಯಾಗುತ್ತಿತ್ತು. ಮನವೆಲ್ಲ ಪ್ರಚಾರ ಕಾರ್ಯವನ್ನು ಪರಿಣಾಮಕಾರಿಯಾಗಿ ಮಾಡುವದರ ಕಡೆಗೆ ಇದ್ದುದರಿಂದ ಶಾಲೆಯ ಅಭ್ಯಾಸ ಅಷ್ಟು ಚೆನ್ನಾಗಿ ಸಾಗುತ್ತಿರಲಿಲ್ಲ. ಮನೆಯವರಿಗೆ ಇಷ್ಟು ಚಿಕ್ಕವಯಸ್ಸಿನಲ್ಲಿ ಇನ್ನೂ ವಿದ್ಯಾರ್ಥಿಯಿರುವಾಗ ದೇಶದ ಗೊಂದಲದಲ್ಲಿ ಇವನು ಬೀಳುವದು ಬೇಡಾಗಿತ್ತು. ಬಡಹುಡಗ, ಎಲ್ಲಿಯಾದರೂ ನಾಲ್ಕು ಅಕ್ಷರ ಕಲಿತುಕೊಂಡು ಏನಾದರೊಂದು ಹೊಟ್ಟೆಯ ಉದ್ಯೋಗ ನೋಡಿಕೊಳ್ಳಬೇಕೆಂದು ಮನೆಯವರ ಮನದಲ್ಲಿತ್ತು. ಅವರು **ನಾನಾ**ನಿಗೆ ಒಂದು ಸಲ ಹೇಳಿದರು. ಎರಡು ಸಲ ಉಪದೇಶಮಾಡಿದರು. ಹಲವು ಸಲ ಬೈದರು, ಬೆದರಿಸಿದರು. ಮಾಡುವುದನ್ನೆಲ್ಲ ಮಾಡುತ್ತಲೇ ಇದ್ದರು. ಏನೂ ಉಪಯೋಗವಾಗಲಿಲ್ಲ. ಇತ್ತ ಇವನು ದೇಶದ ಗೊಂದಲದಲ್ಲಿ ಬಿದ್ದಂದಿನಿಂದ ಸರಕಾರದ ಕಣ್ಣು ಇವನ ಮೇಲೆ ಇದ್ದೇ ಇತ್ತು. ಹೊತ್ತು ನೋಡಿ ಇವನಿದ್ದ ಮನೆಯನ್ನು ಜಪ್ತಿಮಾಡಬೇಕೆಂದು ಸರಕಾರದವರು ಹವಣಿಸುತ್ತಿದ್ದರು. ಇದನ್ನು ತಿಳಿದು ಭಾವುರಾಯರು ಇವನು ಕೂಡಿಸಿಟ್ಟಿದ್ದ ಹೊತ್ತಿಗೆ ಮೊದಲಾದವುಗಳನ್ನೆಲ್ಲ ಸುಟ್ಟುಹಾಕಿಬಿಟ್ಟರು. ಜಪ್ತಿಯಿಂದ ಮನೆಗೆ ತಟ್ಟುವ ಹಾನಿಯ ಕಲ್ಪನೆಯಿಲ್ಲದ ಇವನಿಗೆ ತನ್ನ ಪ್ರಚಾರಕಾರ್ಯದ ಸಾಹಿತ್ಯವನ್ನೆಲ್ಲ ಸುಟ್ಟುಹಾಕಿದರೆಂದು ಸಿಟ್ಟು ಬಂದಿತು. ಮನಸಿಗೆ ಬಹಳ ಅಸಮಾಧಾನವಾಗಿ ಎದೆಯಲ್ಲಿ ತಳಮಳವಾಯಿತು. ತಲೆಯಲ್ಲಿ ತಾಕಲಾಟ

ಪ್ರಾರಂಭವಾಯಿತು. ಮಾಡಿದ ಕಾರ್ಯಕ್ಕೆ ಹುರುಪು ಕೊಡು ವವರಿಲ್ಲದ್ದರಿಂದ ಏನೂ ತೋಚದಂತಾಗಿ ಸಿಡಿಮಿಡಿಗೊಂಡು ನಾಲ್ಕು ರೂಪಾಯಿ, ಒಂದು ಕಪನಿಯನ್ನು ತೆಗೆದುಕೊಂಡು ಪಂಢರಪುರಕ್ಕೆ ಪಲಾಯನ ಹೇಳಿಸಿಬಿಟ್ಟ. ಆಷಾಢ ಏಕಾದಶಿಯಾದ್ದರಿಂದ ಜನಜಾತ್ರೆ ಕೂಡಿತ್ತು. ಆಯಿತು ಕೂಡಲೆ ಕಪನಿಯನ್ನು ಹಾಕಿದನೆ. ಸ್ವದೇಶಿ ವ್ರತದ ವ್ಯಾಖ್ಯಾನಗಳನ್ನು ಪ್ರಾರಂಭಿಸಿದ. ಜನರು ಗುಂಪು ಗುಂಪಾಗಿ ಈ ಕಪನಿವೇಷದ ವ್ಯಾಖ್ಯಾತನ ಸುತ್ತುಮುತ್ತು ನೆರೆಯಹತ್ತಿದರು. ದಿನಾಲು ಎಡೆಬಿಡದೆ ಕೂಡಿದಲ್ಲೆಲ್ಲ ಇವನ ವ್ಯಾಖ್ಯಾನಗಳೇ ವ್ಯಾಖ್ಯಾ ನಗಳು. ಈತೆರ ನಾಲ್ಕು ದಿನಗಳಾದ ಬಳಿಕ ಜಾತ್ರೆ ಮುಗಿಯಿತು. ಬಂದ ಜನರು ತಿರುಗಿದರು. ಪಂಢರಪುರವು ಬರಿದಾಯಿತು. ನಾರಾ ಯಣನಿಗೆ ಆ ಮೇಲೆ ಏನೂ ಕೆಲಸವಿಲ್ಲದಾಯಿತು. ಮುಂದೇನು ಮಾಡಬೇಕೆಂಬುದು ತಿಳಿಯಲಿಲ್ಲ. ತಿರುಗಿ ಹುಬ್ಬಳ್ಳಿಗೆ ಹೋಗಬೇಕೊ ಮತ್ತೆಲ್ಲಿಗಾದರೂ ಹೊರಡಬೇಕೋ ಹೊಳೆಯಲಿಲ್ಲ. ಹತ್ತಿರ ಹಣ ಒಂದೆ ರೂಪಾಯಿ ಉಳಿದಿತ್ತು. ಯಾವುದೂ ತೋಚದೆ ಇತಿಮಿತಿಯಲ್ಲಿ ಬಿದ್ದ ಕಪನಿವ್ಯಾಖ್ಯಾತ. ಇತ್ತ ಮನೆ ಜನರಿಗೆ ಇವನು ಪಂಢರ ಪುರದಲ್ಲಿರುವನೆಂದು ಹುಬ್ಬಳ್ಳಿ ವಾರಕರಿಗಳಿಂದ ತಿಳಿದಿತ್ತು. ಏಳೆಂಟುದಿನ ಕಳೆಯುವಷ್ಟರಲ್ಲಿ ಓಡಿ ಬಂದ ಸಿಟ್ಟೆಲ್ಲ ಇಳಿದದ್ದರಿಂದ ತಿರುಗಿ ಹುಬ್ಬಳ್ಳಿಗೆ ಹೋಗಬೇಕೆಂಬ ವಿಚಾರ ಬಲವಾಗಿ ಬರತೊಡಗಿತು. ಬಗೆ ಬಹಳ ಬಗೆ ಯಾಗಿ ಚಂಚಲವಾಯಿತು. ಸ್ವಂತಕ್ಕೆ ವಿಚಾರ ಬರುವಂತಿಲ್ಲ. ದಾರಿ ತೋರಿಸುವ ಮುಂದಾಳುವಿಲ್ಲ. ಯಾವ ತರದ ಅನುಭವವೂ ಇಲ್ಲ. ಹೊತ್ತುಹೊತ್ತಿಗೆ ತಿಂಡಿತಿನಸು ಊಟ ಸಿಗದ್ದರಿಂದ ಮನೆಯಲ್ಲಿದ್ದರೆ ಎಷ್ಟು ಸುಖವಾಗಿ ಇರುತ್ತಿದ್ದೆನಲ್ಲ! ಎಂದೆನತೊಡಗಿದ. ದೇಶಾಭಿಮಾನವು ಹುಟ್ಟಿದ್ದರೂ ಸುಖದಲಾಲಸೆ ಬಿಟ್ಟಿರಲಿಲ್ಲ. ಕಷ್ಟವು ಹೆಚ್ಚಾದಂತೆ ಮನೆ ಸುಖ ಇಮ್ಮಡಿಯಾಗಿ ಕಣ್ಣಿಗೆ ಕಾಣಹತ್ತಿತು. "ನಾನೇನು ಮಾಡಿದೆನೀಕೆಲಸ" ಎಂದು ತಳಮಳಿಸ ತೊಡಗಿದ. ಆದರೆ ಮಾಡುವು ದೇನು? ಎಲ್ಲಿಯಾದರೂ ಹೋಗಬೇಕೆಂದರೆ ಹಣವೊಂದು ಬೇಕಲ್ಲ. ಕೊನೆಗೆ ಸೊಲ್ಲಾಪುರದಲ್ಲಿ ತಮ್ಮ ಆಪ್ತರಿರುವುದಾಗಿ ಗೊತ್ತಿತ್ತು.

ಕೂಡಲೆ ಕಾಲುನಡಿಗೆಯಿಂದ ನಾಲ್ವತ್ತು ಮೈಲು ದೂರದಲ್ಲಿರುವ ಸೊಲ್ಲಾಪುರಕ್ಕೆ ಇರುಳೆಲ್ಲ ನಡೆದು ಮುಟ್ಟಿದ. ಹದಿನಾರು ವಯಸ್ಸಿನ ಹುಡುಗ, ಒಂದೇಸವನೆ ನಾಲ್ವತ್ತು ಮೈಲುಗಳ ನಡೆತ. ಹೊಟ್ಟೆಯಲ್ಲಿ ಅನ್ನವಿಲ್ಲ. ಇರುಳೆಲ್ಲ ನಿದ್ದೆಯಿಲ್ಲ. ಊರಿಗೆ ಬಂದು ಏನಾದರು ತಿನ ಬೇಕೆಂದರೆ ಹತ್ತರ ಕಾಸಿಲ್ಲ. ಮಾಡುವದೇನು ? ನಿರಾಶೆಯೆ ನಿರಾಶೆ. ಮನಸ್ಸಿಗೆ ಚಂಚಲ, ಹೊಟ್ಟೆಯಲ್ಲಿ ಕಳವಳ, ಕಣ್ಣಿಗೆ ಕತ್ತಲ ಕವಿಯು ತೊಡಗಿತು. ಜೀವನವು ಸಾಕಾಗಿ ಮರಣವೇ ಬೇಕಾಗಿ ಕಣ್ಣೀರಿಟ್ಟ. ಯಾರು ಕೇಳಬೇಕು ಅವನ ಗೋಳು. ಅಂತಹ ಕಷ್ಟತಮ ಸ್ಥಿತಿಯಲ್ಲಿ ಹಾಗೂ ಹೀಗೂ ಅದು ಹೇಗೆ ಬಂದನೊ ಅವನಿಗೇ ಗೊತ್ತಿಲ್ಲ. ಆ ಬಳಗ ದವರ ಮನೆಗೆ ಬಂದು ಬಿದ್ದ. ಅಲ್ಲಿ ಕೆಲವು ದಿನಗಳಿದ್ದು, ಪುಣೆಗೆ ಹೊರಟ. ಪಂಢರಪುರದಿಂದಲೆ ಊರಿಗೊಂದು ಪತ್ರ– "ನಾನು ಸುಖವಾಗಿರುವೆ ಚಿಂತೆ ಮಾಡಬಾರದು...." ಮುಂತಾಗಿ ಬರೆದು ತಾನು ಹುಬ್ಬಳ್ಳಿ ಬಿಟ್ಟಂದಿನಿಂದ ಇಲ್ಲಿಯ ವರೆಗಾದ ಸಂಗತಿಗಳನ್ನೆಲ್ಲ ಕಾಣಿಸಿ "ಏನಾದರು ಕಾರ್ಯವನ್ನು ಮಾಡದೆ ಮುಖಕಮಲವನ್ನು ತೋರಿಸುವದಿಲ್ಲೆಂ"ದು ತಿಳಿಸಿದ್ದ. ಆದರೆ ಹುಬ್ಬಳ್ಳಿಗೆ ಹೋಗುವ ವಿಚಾರ ಮಾತ್ರ ತಲೆಯಲ್ಲಿ ತುಂಬಿತ್ತು.

ಕೆಲವು ದಿನಗಳ ನಂತರ ಬೆಳಗಾವಿಗೆ ಬಂದು "ಕುಂಠೆ" ಇಂಗ್ಲೀಷ ಸ್ಕೂಲ ಎಂಬ ಗಾವಠಿ ಶಾಲೆಯಲ್ಲಿ ಶಿಕ್ಷಕನಾಗಿ ಕೆಲಸ ಮಾಡಿದ. ಅಲ್ಲದೆ ನೆಯ್ಗೆಯನ್ನು ಇಲ್ಲಿ ಕಲಿತ. ಆದರೂ ಹುಬ್ಬಳ್ಳಿಯ ವಿಚಾರ ತಲೆಯಿಂದ ಹೋಗುವುದೆಂತು ? ಸುಮ್ಮನೆ ಹೋಗುವಂತಿಲ್ಲ. ಹೀಗಾಗಿ ಯೋಚನೆಗಳ ತಾಕಲಾಟ ನಡದೆ ಇತ್ತು. ಅಷ್ಟರಲ್ಲಿ ರಾಮಮೂರ್ತಿಯವರ ಸರ್ಕಸ್ಸು ಬೆಳಗಾವಿಗೆ ಬಂದಿತು. ಮುಂದಿನ ಊರುಗಳಲ್ಲೆಲ್ಲ ಮೊದಲು ವ್ಯವಸ್ಥೆ ಮಾಡಲು ಅವರಿಗೊಬ್ಬ ಅಡ್ವಾನ್ಸು ಮೇನೇಜರನು ಬೇಕಾಗಿದ್ದ. ನಾರಾ ಯಣನು ಆ ಕೆಲಸ ಕೈಕೊಂಡ; ಸರ್ಕಸ್ಸು ಗದಗಿಗೆ ಬಂತು, ಅಲ್ಲಿಂದ ಹುಬ್ಬಳ್ಳಿಗೆ ಬಂದಿತು. ಹುಬ್ಬಳ್ಳಿಗೆ ಬಂದ ಕೂಡಲೆ ಆ ಕೆಲಸವನ್ನು ಮನೆ ಯವರು ಬಿಡಿಸಿ ಬಿಟ್ಟರು.

ಇಷ್ಟರೊಳಗೆ ಹುಬ್ಬಳ್ಳಿಯಲ್ಲಿ ಧಾರವಾಡದ ಶ್ರೀ ಬಿಂದು ನಾರಾಯಣ

ಮುತಾಲಿಕ ದೇಸಾಯಿಯವರು **ಕನ್ನಡ ಕೇಸರಿ** ಎಂಬ ವೃತ್ತ ಪತ್ರವನ್ನು ಹೊರಡಿಸಿದ್ದರು. ಮರಾಠಿ ಕೇಸರಿಯಲ್ಲಿಯ ಲೇಖಗಳನ್ನು ಕನ್ನಡಿಸಿ ಮುದ್ರಿಸುವದೆ ಅದರ ಗುರಿಯಾಗಿತ್ತು. ಅಲ್ಲದೆ ಕೆಲವು ಸ್ವತಂತ್ರ ಲೇಖಗಳು ಬರುತ್ತಿದ್ದವು. ಸಂಪಾದಕರು ಧಾರವಾಡದಲ್ಲಿರುತ್ತಿದ್ದುದ ರಿಂದ ಹುಬ್ಬಳ್ಳಿಯಲ್ಲೊಬ್ಬ ಆಡಳಿತೆಗಾರರು ಬೇಕಾಗಿತ್ತು. ತಿಂಗಳಿಗೆ ಇಪ್ಪತ್ತೈದು ರೂಪಾಯಿ ಸಂಬಳ ಗೊತ್ತುಮಾಡಿಕೊಂಡು ನಾರಾ ಯಣನು ಆ ಕೆಲಸಕ್ಕೆ ನಿಂತ. ನಿಂತು ಅದರಲ್ಲಿ ಸ್ವತಂತ್ರವಾಗಿ ಕೆಲವು ಲೇಖಗಳನ್ನು ಬರೆಯತೊಡಗಿದ. ಒಮ್ಮೆ ಇವನದೊಂದು ಜಾಜ್ವಲ್ಯ ವಾದ ಲೇಖನವು ಆಕ್ಷೇಪಾರ್ಹವಾದುದೆಂದು ಗೊತ್ತಾದ್ದರಿಂದ ಅಂಚೆಯ ಕಟ್ಟಿಗೆ ಕಳಿಸಿದ ಪತ್ರಗಳನ್ನೆಲ್ಲ ಹಿಂದಕ್ಕೆ ತಂದು ಆ ಬರೆಹದ ಮೇಲೆ ಬೇರೆ ವಿಷಯದ ಲೇಖನವನ್ನು ಮುದ್ರಿಸಿದ ಕಾಗದ ಹಚ್ಚಿ ಕಳಿಸಿ ಕೊಟ್ಟರು.

ಈ ರೀತಿ ಕೆಲವು ದಿನ ಕಳೆಯುತ್ತಿರಲು ಕಲಕತ್ತೆಯ ನ್ಯಾಷನಲ್ ಮೆಡಿಕಲ್ ಕಾಲೇಜಕ್ಕೆ ವಿದ್ಯಾಭ್ಯಾಸಕ್ಕೆ ಹೋಗಬೇಕೆಂದು ನಿಶ್ಚಿತ ವಾಯಿತು. ಕಾರಣ ವೃತ್ತಪತ್ರದ ಕೆಲಸವನ್ನು ಬಿಟ್ಟುಬಿಟ್ಟು ಕಲ ಕತ್ತೆಗೆ ಹೊರಡುವ ಸಿದ್ಧತೆ ನಡಿಸಿದ. ಈಗ ಸಂಕೇಶ್ವರದಲ್ಲಿರುವ ಡಾ॥ ಅಂಕಲೆಕರರು ಆಗ ಕಲಕತ್ತೆಯಲ್ಲಿ ವೈದ್ಯಕಿ ಅಭ್ಯಾಸ ಮಾಡುತ್ತಿದ್ದರು. ೮-೧೦ ರೂಪಾಯಿಗಳನ್ನು ತಕ್ಕೊಂಡು ಅವರ ಗೊತ್ತಿನ ಸಹಾಯದಿಂದ ಹುಬ್ಬಳ್ಳಿ ಬಿಟ್ಟ. ಕಾಶಿಗೆ ಹೊರಟ. ಹಾಗೂ ಹೀಗೂ ಕಾಶಿಯಿಂದ ಕಲ ಕತ್ತೆಗೆ ಬಂದು ೧೯೦೯ರಿಂದ ೧೯೧೩ರ ಸೆಪ್ಟೆಂಬರದ ವರೆಗೆ ಅಭ್ಯಾಸಮಾಡಿ **ಎಮ್. ಸಿ. ಪಿ. ಯಸ್** (Member of the college of physicians and surgeons) ಎಂಬ ಪದವಿಯನ್ನು ಪಡೆದ.

ಇದೆ ಹೊತ್ತಿಗೆ ಶ್ರೀ ಅರವಿಂದ ಘೋಷರ ನ್ಯಾಶನಲ್ ಕೌನ್ಸಿಲ್ ಆಫ್ ಎಜ್ಯುಕೇಶನ್ ಎಂಬ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯು ಕಲಕತ್ತೆ ಯಲ್ಲಿ ಪ್ರಾರಂಭವಾಗಿತ್ತು. ಆ ಸಂಸ್ಥೆಯ ಐದನೆ ವರ್ಗವೆಂದರೆ ಸರ ಕಾರಿ ಮ್ಯಾಟ್ರಿಕ್ ಪರೀಕ್ಷೆಗೆ, ಏಳನೆ ವರ್ಗವು ಇಂಟರ ಸಾಯಿನ್ಸಕ್ಕೆ ಸಮಾನವಾಗಿದ್ದವು. ಇವನು ನ್ಯಾಷನಲ್ ಕಾಲೇಜದ ಅಭ್ಯಾಸವನ್ನಲ್ಲದೆ,




೧೯೧೧ ರಲ್ಲಿ ಡಾಕ್ಟರರು

ಇವೆರಡರ ಅಭ್ಯಾಸ ಮಾಡಿ ಅವುಗಳಲ್ಲಿ ತೇರ್ಗಡೆ ಹೊಂದಿದ. ಇತ್ತ ಹುಬ್ಬಳ್ಳಿಯಲ್ಲಿ ನಾರಾಯಣನ ಕಾರ್ಯಗಳನ್ನೆಲ್ಲ ಶ್ರೀ ಬೇವೂರ ಭೀಮರಾಯರ ನೋಡುತ್ತಿದ್ದರು. ಇವನು ಕಲಕತ್ತೆಯಲ್ಲಿರುವಾಗ ಬರಿ ಅಭ್ಯಾಸ ಮಾಡುತ್ತ ಕೋಣೆ ಹಿಡಿದು ಕೂಡುತ್ತಿರಲಿಲ್ಲ. ಸಾರ್ವಜನಿಕ ಸಭೆಗೆ ಹೋಗುವದು, ಅನೇಕ ಸನ್ಮಾನ್ಯ ಗೃಹಸ್ಥರೊಡನೆ ಸ್ನೇಹ ಬೆಳೆಸುವದು, ಸ್ಥಾನಿಕ ಕಾರ್ಯಗಳಲ್ಲಿ ಭಾಗ ತಕ್ಕೊಂಡು ಪ್ರಚಾರ ಕಾರ್ಯದ ಅಭ್ಯಾಸ ಮಾಡುತ್ತಿದ್ದ. ೧೯೧೧ರ ಅಖಿಲ ಭಾರತ ರಾಷ್ಟ್ರೀಯ ಅಧಿವೇಶನವು ಕಲಕತ್ತೆಯಲ್ಲಿ ಕೂಡಿತು. ಆದಕ್ಕಾಗಿ ಸ್ವಯಂಸೇವಕನಾಗಿದ್ದ. ಒಮ್ಮೆ ತಮ್ಮ ಕಾಲೇಜದ ಮುಖ್ಯಾಧ್ಯಾಪಕರು ನಗರ ಸಭೆಯ ಹುರಿಯಾಳಾಗಿ ನಿಲ್ಲಲು ಅವರಿಗಾಗಿ ಕೆಲಸ ಮಾಡಿದ. ಅಲ್ಲದೆ ಯಂಗ ಮೆನ್ಸ ಕ್ರಿಶ್ಚಿಯನ್ ಅಸೋಸಿಯೇಶನ್ನದ ಸಭಾಸದನಾಗಿದ್ದ. ಈ ರೀತಿಯಾಗಿ ಹೋದಲ್ಲೆಲ್ಲ ತನ್ನ ಅಭ್ಯಾಸವನ್ನಲ್ಲದೆ ಸಾರ್ವಜನಿಕ ಕಾರ್ಯಗಳಲ್ಲೆಲ್ಲ ಕೈಹಾಕುತ್ತಿದ್ದುದರಿಂದ ಸಾರ್ವಜನಿಕ ಕೆಲಸ ಮಾಡುವದು ಅವನ ಸ್ವಭಾವವಾಗಿ ಬಿಟ್ಟಿತು.

ಹೀಗಿರುತ್ತಿರಲು ಮೈಯಲ್ಲಿ ಇಸಬಿಸ ರೋಗವು ತಲೆದೋರಿತು. ಎಷ್ಟು ಔಷಧಗಳನ್ನು ಹಚ್ಚಿದರೂ ಅದು ಹೋಗಲಿಲ್ಲ. ಕೊನೆಗೆ ಒಮ್ಮೆ ಹುಬ್ಬಳ್ಳಿಗೆ ಬಂದಾಗ್ಗೆ, ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನಲ್ಲಿ ಬಗಡಗೆರೆಯಲ್ಲಿ ಸಾಧುಗಳು ಇದ್ದಾರೆ– ಅವರ ಸೇವೆ ಮಾಡಿದರೆ ಈ ತ್ವಚರೋಗ ಹೋಗುವುದೆಂದು ತಿಳಿದು ಬಂತು. ಸರಿ, ಕಲಕತ್ತೆಯಿಂದ ಬಂದಾಗಲೆಲ್ಲ ಅಲ್ಲಿಗೆ ಹೋಗುವದು ಬರುವದು ಪ್ರಾರಂಭವಾಯಿತು.

ಕಾಲೇಜದಲ್ಲಿ, ಅದೂ ನವನಾಗರಿಕತೆಯಿಂದ ಬೆಳಗುತಿದ್ದ ಕಲಕತ್ತೆಯಲ್ಲಿರುತ್ತಿದ್ದರೂ ಇವನಲ್ಲಿ ಸಾಧುಗಳ ವಿಷಯಕ್ಕೆ ಭಕ್ತಿವಿಶ್ವಾಸಗಳು ಕಡಿಮೆಯಾಗಿರಲಿಲ್ಲ. ಬರಬರುತ್ತ ಅಭ್ಯಾಸದ ಎಚ್ಚರವಿಲ್ಲದೆ, ಬಗಡಗೆರೆಯಲ್ಲಿಯೇ ಕೆಲವು ದಿನ ಇದ್ದುಬಿಟ್ಟ. ಸಾಧುಗಳ ಸೇವೆಯಲ್ಲಿ ತಲ್ಲೀನನಾಗಿ ಜಪ ಮಾಡುವುದು, ಮಂತ್ರಪಠನೆ, ಪುರಾಣ, ಭಗವದ್ಗೀತೆ ಮುಂತಾದ ಎಲ್ಲ ಧಾರ್ಮಿಕ ಗ್ರಂಥಗಳನ್ನು ಓದುವದು ಇವನ ನಿತ್ಯ ಕರ್ಮಗಳಾಗಿ ಬಿಟ್ಟವು. ಹಾಡು, ಕವಿತೆ, ವೃತ್ತಗಳನ್ನು ಬರೆದು

ಕವಿಯಾಗತೊಡಗಿದ. ಈ ಹಾಡುಗಳೆಲ್ಲ ಸದ್ಯಕ್ಕೆ ಅವರ ಹತ್ತಿರ ಇವೆ. ಬರೆದ ಭಾಷೆ ಮರಾಠಿ.

ಮುಂದೆ ಸಾಧುಗಳು ಕೋಟಿಲಿಂಗಾರ್ಚನೆಯ ಸಮಾರಂಭ ಹೂಡಿದರು. ಅದಕ್ಕೆ ಬಹಳ ಹಣಬೇಕಾಯಿತು. ಅದನ್ನು ಕೂಡಿಸಲು ನಾರಾಯಣನೆ ಸಮರ್ಥನೆಂದು ಅವನಿಗೆ ಆ ಕಾರ್ಯವನ್ನು ನಿಯಮಿಸಲಾಯಿತು. ಕೂಡಲೆ ಇವನು ಬೆಂಗಳೂರಲ್ಲಿ ಆಗಿನ ದಿವಾನರಾದ ಸರ್. ಎಮ್. ವಿಶ್ವೇಶ್ವರಯ್ಯನವರನ್ನು, ಸೊಂಡೂರ ಮಹಾರಾಜರನ್ನು ಕಂಡನು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ.

ಇಷ್ಟೆಲ್ಲ ಸೇವೆ ಮಾಡುತ್ತಿದ್ದರೂ ಇನಬು ಮಾತ್ರ ಯಥಾಸ್ಥಿತವಾಗಿತ್ತು. ಮುಂದೊಮ್ಮೆ ಈ ಸಾಧುಗಳು ಹುಬ್ಬಳ್ಳಿಗೆ ಬಂದರು. ಇವನು ಅವರನ್ನು ಶೇವಡೆಯವರ ಮನೆಗೆ ತಂದಿಳಿಸಿದ. ಸಾಧುಗಳು ಪೂಜೆ–ಪುನಸ್ಕಾರ ಮುಗಿಸಿ ತೀರ್ಥ ಪ್ರಸಾದವನ್ನು ಕೊಡುವ ಕಾಲಕ್ಕೆ ಭಾವುರಾಯರ ಮಗಳು ಬಾಲವಿಧವೆ ಗಂಗೂತಾಯಿಗೆ "ಕುಂಕುಮ ಹಚ್ಚಿಕೋ" ಎಂದರು. ಎಲ್ಲರಿಗೂ ಈ ಮಾತು ಹಾಸ್ಯಾಸ್ಪದವಾದರೂ ನಾರಾಯಣನಿಗೆ ಮಾತ್ರ ಸಾಧುಗಳಲ್ಲಿಯ ವಿಶ್ವಾಸದ ಮೂಲಕ ಆ ಮಾತಿನಲ್ಲಿ ಅರ್ಥವಿತ್ತೆಂದೆನಿಸಿತು. ಬರಬರುತ್ತ ಆ ಮಾತಿನಲ್ಲಿಯ ನಂಬುಗೆ ಕಳೆದು ಹೋಗಿ ಅಮೇರಿಕೆಗೆ ಹೋಗುವ ಹೊತ್ತಿಗೆ ಅವನಿಗೂ ಅದು ಹಾಸ್ಯಾಸ್ಪದವೆನಿಸಿ ನಗೆ ಬರಹತ್ತಿತು.

# ಪರದೇಶಗಮನ

ನಾರಾಯಣನು ಡಾ. ಹರಡೀಕರನಾದ. ಕೇಸರಿ ಪತ್ರವನ್ನು ಓದುತ್ತಿರುವಾಗಲೇ ಇವನ ಮನದಲ್ಲಿ ಅಮೇರಿಕೆಗೆ ಹೋಗಬೇಕೆಂಬ ಕಲ್ಪನೆ ಹುಟ್ಟಿತ್ತು. ಕಲಕತ್ತೆಯಲ್ಲಿಯ ಸಾರ್ವಜನಿಕ ಕಾರ್ಯಗಳ ಅನುಭವದಿಂದಂತೂ ಈ ವಿಚಾರಕ್ಕೆ ಮತ್ತಿಷ್ಟು ಕಳೆಯೇರಿತು. ಆದುದರಿಂದ ೧೯೧೧ ರಲ್ಲಿಯೇ ಅಮೇರಿಕೆಯ ಬೇರೆ ಬೇರೆ ವಿಶ್ವವಿದ್ಯಾಲಯಗಳ ವಿಷಯಕ್ಕೆ ಅಲ್ಲಿದ್ದ ತನ್ನ ಗೆಳೆಯರೊಡನೆ ಪತ್ರವ್ಯವಹಾರ ಮಾಡಿ, ಅಲ್ಲಿಯ ಅಭ್ಯಾಸಕ್ರಮ, ಕಲಿಯುವ ಅವಧಿ, ಕೊಡಬೇಕಾದ ಹಣ, ಬರಬಹುದಾದ ವೆಚ್ಚ, ವಿದ್ಯಾರ್ಥಿಯಲ್ಲಿರಬೇಕಾದ ಯೋಗ್ಯತೆಗಳ ವಿಷಯಕ್ಕೆ ತಿಳಿದುಕೊಂಡಿದ್ದ.

ಅಮೇರಿಕೆಯ ವಿಚಾರವು ಮೂರ್ತಸ್ವರೂಪಕ್ಕೆ ಬರಲು ಕಾರಣರು ಡಾ. ಹರಡೀಕರ, ಹಾಗೂ ಡಾ.ಜಿ.ವ್ಹಿ. ಅಂಕಲೀಕರರು. ಇಬ್ಬರೂ ಹೊತ್ತು ಸಿಕ್ಕಾಗ ಇದೇ ವಿಷಯವಾಗಿ ಚರ್ಚೆಮಾಡಿ ಅನುಕೂಲತೆ, ಅನಾನುಕೂಲತೆ, ಎದುರಿಸಬೇಕಾದ ಕಷ್ಟಗಳು, ಪ್ರತಿಯೊಬ್ಬರಲ್ಲಿರಬೇಕಾದ ದೃಢನಿಶ್ಚಯ ಬುದ್ಧಿ, ಸಹಕಾರದ ಅವಶ್ಯಕತೆ ಮೊದಲಾದವುಗಳ ವಿಷಯವಾಗಿ ವಿಚಾರಮಾಡುತ್ತಿದ್ದರು. ತಾವಿಬ್ಬರೂ ಒಂದೇ ಕಟ್ಟಿನವರಂತಿದ್ದು, ತಮ್ಮೊಳಗಿನ ಸಂಬಂಧವು ಆದಷ್ಟು ಬೆಳೆಯುವದರ ಕಡೆಗೆಯೇ ಪ್ರಯತ್ನಪಡಬೇಕಲ್ಲದೆ ಅದಕ್ಕೆ ಎಳ್ಳಷ್ಟೂ ಕೊರತೆ ಬಾರದಂತೆ ನೋಡಿಕೊಳ್ಳಬೇಕು. ಅಭ್ಯಾಸವನ್ನು ಮುಗಿಸಿಕೊಂಡು, ಹಿಂದುಸ್ಥಾನಕ್ಕೆ ಮರಳಿದನಂತರ ಮಿಶನರಿಗಳ ತತ್ವ–ಪದ್ಧತಿಗಳಂತೆ ಒಂದು ರುಗ್ಣಾಲಯವನ್ನು ತೆರೆದು ಅದಕ್ಕಾಗಿ ಇಬ್ಬರೂ ತಮ್ಮ ಆಯುಷ್ಯವನ್ನೆಲ್ಲ

ಮುಡಿಪಿಡಬೇಕೆಂದು ನಿಶ್ಚಯಿಸಿದರು. ಈ ಉದ್ದೇಶವನ್ನು ಜನತೆಯ ಮುಂದಿಡಲು ಹಸ್ತ ಪತ್ರಿಕೆಗಳನ್ನು ಹಂಚಿದರು. ಇಬ್ಬರೂ ತಾವು ಕಲಿಯ ಬೇಕಾದ ವಿಷಯವನ್ನು ಕೂಡ ಗೊತ್ತುಮಾಡಿಕೊಂಡಿದ್ದರು. ಇಷ್ಟ ರಲ್ಲಿ ಕುಂದಗೋಳದ ರಾ. ವೆ. ನಾಡಗೇರರು ಇವರನ್ನು ಬಂದು ಕೂಡಿ ದರು. ಡಾ. ಹರಡೀಕರರು ಸಾರ್ವಜನಿಕ ಆರೋಗ್ಯ, ಡಾ. ಅಂಕಲೀ ಕರರು ಶಸ್ತ್ರಕ್ರಿಯೆ, ಡಾ. ನಾಡಿಗೇರರು ಔಷಧಗಳ ವಿಷಯವಾಗಿ ಅಭ್ಯಾಸಮಾಡಬೇಕೆಂದು ಗೊತ್ತಾಯಿತು. ಹರಡೀಕರರು ಸಾರ್ವಜನಿಕ ಆರೋಗ್ಯವನ್ನು ಆರಿಸಲು ಕಾರಣವೆಂದರೆ, ಅದು ಜನತೆಗೆ ಹೆಚ್ಚು ಉಪ ಯೋಗವಾಗಿ, ತಮಗೆ ಸಾರ್ವಜನಿಕ ಕಾರ್ಯಮಾಡುವದಕ್ಕೊಂದು ಉಪಾಯವಾಗುವದಲ್ಲದೆ ರುಗ್ಣಾಲಯಕ್ಕೆ ಹಣಕೂಡಿಸಲು ಅದೊಂದು ಚೆನ್ನಾದ ಮಾರ್ಗವೆಂದು.

ತಮ್ಮ ಇಚ್ಛೆಯನ್ನು ಅಲ್ಲಲ್ಲಿಯ ಮುಖಂಡರಿಗೆ, ಪರದೇಶಕ್ಕೆ ಹೋಗಿಬಂದ ಜನರಿಗೆ, ತಿಳುಹಿಸಿ ಅವರಿಂದ ಸಲಹೆಗಳನ್ನು ಹೊಂದ ಲುಪಕ್ರಮಿಸಿದರು. ಎಲ್ಲರೂ ಈ ವಿಚಾರ-ಉದ್ದೇಶಗಳನ್ನು ಕೇಳಿ ಉತ್ತೇ ಜನ ಕೊಡುವದಂತಿರಲಿ, ನಕ್ಕುಬಿಟ್ಟರು. ಮಹಾರಾಷ್ಟ್ರದಲ್ಲಿ ಜ್ಞಾನ ಕೋಶವನ್ನು ಬರೆದ ಡಾ. ಕೇತಕರರು ಅದೇ ಅಮೇರಿಕೆಯಿಂದ ಬಂದಿ ದ್ದರು; ಅವರನ್ನು ಕಂಡು ಕೇಳಲು, "ಅಮೇರಿಕೆಗೆ ಹೋಗುವದಾದರೆ ಪ್ರತಿಯೊಬ್ಬನ ಹತ್ತರ ೨೫ ಸಾವಿರ ರೂಪಾಯಿಗಳು ನಗದಾಗಿರಬೇಕು. ಅಲ್ಲಿ ಹೋದಬಳಿಕ ಗೋಮಾಂಸವನ್ನು ಅವಶ್ಯವಾಗಿ ತಿನ್ನಬೇಕಾಗುವ ದೆಂಬುದನ್ನು ಲಕ್ಷ್ಯದಲ್ಲಿಟ್ಟು, ಅದಕ್ಕಾಗಿ ಹಿಂದುಸ್ಥಾನ ಬಿಡುವ ಮೊದಲು ಸಿದ್ಧತೆಯನ್ನು ಮಾಡಿಕೊಂಡೇ ಹಡಗವನ್ನು ಹತ್ತಬೇಕು. ಇಲ್ಲವಾದರೆ ಆ ವಿಚಾರವನ್ನೇ ಬಿಟ್ಟು ಬಿಡಬೇ"ಕೆಂದು ಹೇಳಿ ನಿರಾಶೆ ಗೊಳಿಸಿದರು. ಅಮೇರಿಕೆಯಿಂದ ಬಂದ ಇನ್ನೊಬ್ಬ ಮಹನೀಯರೂ ಕೂಡ ಇದೇ ರೀತಿಯ ನಿರುತ್ತೇಜಕ ಸಲಹೆಗಳನ್ನೇ ಕೊಟ್ಟರು.

ಇನ್ನೇನು ಮಾಡುವದು? ಒಬ್ಬನಿಗೆ ೨೫ ಸಾವಿರ ರೂಪಾಯಿ! ಮೇಲೆ ಗೋಮಾಂಸ ತಿನ್ನಬೇಕು; ಇತ್ತ ಮುಂದಾಳುಗಳ ಬೆಂಬಲವಿಲ್ಲ; ಅತ್ತ ಜನರಾದರೊ ನಕ್ಕುಬಿಟ್ಟರು; ಕೊಂಚ ದಿಗಿಲು ಬೀಳಲು ಎಲ್ಲರೂ

ಕೂಡಿ ವಿಚಾರ ಮಾಡಿದರು; ಕೇಳಿದ್ದನ್ನೆಲ್ಲ ಮರೆತುಬಿಟ್ಟು, ಹೋಗುವದ ಕ್ಕಾಗಿ ಪಣತೊಟ್ಟು, ಸಿದ್ಧತೆ ನಡೆಯಿಸಿಯೇ ಬಿಟ್ಟರು. ೧೯೧೩ರಲ್ಲಿ ಹೊರಡುವದೆಂದು ನಿಶ್ಚಿತವಾಯಿತು.

ಅಮೇರಿಕೆಗೆ ಹೋಗುವದೆಂದರೆ ಸಣ್ಣ ಮಾತಾಗಿರಲಿಲ್ಲ. ಹಣದ ಪ್ರಶ್ನೆಯು ಗುಡ್ಡದಂತಹದಾಗಿತ್ತು. ಈ ಮೂವರಲ್ಲಿ ನಾಡಗೇರರು ಶ್ರೀಮಂತರು, ಅಂಕಲಿಕರರ ತಂದೆಯವರು ಸಬ್-ರಜಿಸ್ಟ್ರಾರರು; ಇವರಿಬ್ಬರಿಗೂ ಹಣದ ಕೊರತೆ ಇರಲಿಲ್ಲ. ಹರಡೀಕರರಿಗೆ ಮಾತ್ರ ಲಕ್ಷ್ಮಿಯ ಪ್ರಸಾದ ಲಭಿಸಿರಲಿಲ್ಲ. ಕಾರಣ ಇವರು ಪರದೇಶಗಳಲ್ಲಿ ದುಡಿದು ಹೊಟ್ಟೆ ತುಂಬಿಕೊಳ್ಳುತ್ತಲೇ ಕಲಿಯುವದು ಸಾಧ್ಯವೆಂಬುದನ್ನು ಗೊತ್ತು ಹಚ್ಚಿ, ಆದರಂತೆ ಅಮೇರಿಕೆಯಲ್ಲಿರಬೇಕೆಂದು ನಿಶ್ಚಯಿಸಿ, ಸಾಧ್ಯವಿದ್ದಷ್ಟು ಹಣಕೂಡಿಸಲು ಯತ್ನಿಸತೊಡಗಿದರು.

ಆಗಿನ ಕಾಲದಲ್ಲಿ ಪರದೇಶಕ್ಕೆ ಹೋಗುವವನು 'ಪಾಸ್ ಪೋರ್ಟು' ಹೊಂದಬೇಕೆಂಬುದೇನು ಅಷ್ಟು ಅವಶ್ಯವಿರಲಿಲ್ಲ. ಹೋಗುವವನ ಗೊತ್ತಿಗಾಗಿ ಆಯಾ ಜಿಲ್ಹೆಯ ಕಲೆಕ್ಟರನ ಕಡೆಯಿಂದ ಒಂದು ಪರಿಚಯ ಪತ್ರ (Identification certificate )ವನ್ನು ದೊರಕಿಸಬೇಕಾಗುತ್ತಿತ್ತು. ಉಳಿದಿಬ್ಬರು ಇಂತಹ ಪರಿಚಯ ಪತ್ರಗಳನ್ನು ಸುಲಭವಾಗಿ ದೊರಕಿಸಿದರು. ಡಾ. ಹರಡೀಕರರಿಗೆ ಮಾತ್ರ ಈ ಕಾರ್ಯದಲ್ಲಿ ಸಹಾಯ ಮಾಡುವವರು ಕಾಣದಾದರು. ಅಷ್ಟರಲ್ಲಿ ತಮ್ಮ ತಂದೆಯ ಪರಮಸ್ನೇಹಿತರಾದ ಕರಂದೀಕರರ ನೆನಪಾಗಿ ಅವರ ಕಡೆಗೆ ಹೋದರು. ಅವರು ಈ ಸಂಬಂಧವಾಗಿ ಮನ-ಮುಟ್ಟಿ ಯತ್ನಮಾಡಿ ಧಾರವಾಡ ಜಿಲ್ಲೆಯ ಕಲೆಕ್ಟರರಿಂದ ಪರಿಚಯ ಪತ್ರವನ್ನು ಕೊಡಿಸಿದರು. ತಾವೆಲ್ಲರೂ ಅಮೇರಿಕೆಗೆ ಹೊರಡುವ ದಿನವನ್ನು ಈ ಮೊದಲೇ ಪ್ರಸಿದ್ಧಿಸಿದ್ದರು. ಅದೇ ಮೇರೆಗೆ ಮೂವರೂ ಮುಂಬಯಿಗೆ ಹೊರಟರು. ಧಾರವಾಡ ರೇಲ್ವೆ ಸ್ಟೇಶನ್ನಿನಲ್ಲಿ, ಇವರೆಲ್ಲರನ್ನು ಬೀಳ್ಕೊಡುವದಕ್ಕಾಗಿ,ಆಲೂರ ವೆಂಕಟರಾಯರು, ಜೋಶಿ ವಿನಾಯಕರಾಯರು, ಮುದವೀಡು ಕೃಷ್ಣರಾಯರು, ಕರಂದಿಕರರೇ ಮೊದಲಾದ ಪ್ರಮುಖ ೩೦-೪೦ ಜನರು ಸೇರಿದ್ದರು. ಆದುವರೆಗೆ ಹರಡೀಕರರ

ಹೆಸರಿನಿಂದ ಕೂಡಿಸಿದ ೧೧೦೦ ರೂಪಾಯಿಗಳ ಚೀಲವನ್ನು ಕರಂದಿಕರರು ಅದೇ ಸಮಯದಲ್ಲಿ ಕೊಟ್ಟರು.

ಮುಂಬಯಿಯಲ್ಲಿ ಹಡಗವು ಹೊರಡುವ ಮೊದಲು ಛಾಯಾ ಚಿತ್ರವನ್ನು (ಫೋಟೊ) ತೆಗೆಯಿಸುವ ಏರ್ಪಾಡು ಮಾಡಿದ್ದರು. ಆ ಕಾರ್ಯಕ್ರಮವು ನಡೆದಿರುವಾಗಲೇ ಡಾಕ್ಟರರಿಗೆ ಒಂದು ತಂತಿಯು ಬಂತು. ಅದನ್ನು ಓದಿ ನೋಡಲು "ಕರಂದಿಕರರು ಸ್ವರ್ಗವಾಸಿಗಳಾದರು, ನೀನು ಹೊರಡುವದನ್ನು ನಿಲ್ಲಿಸು" ಎಂದು ಹರಡೀಕರರ ಅಕ್ಕನ ಮಕ್ಕಳಾದ ಲೋಕರೆ ಭಾಸ್ಕರರಾಯರು ಬರೆದಿದ್ದರು. ಆಯಿತು. ಮೊದಲನೇ ತುತ್ತಿಗೆ ನೊಣ ಬಂದಂತೆ ಇನ್ನೂ ಹಡಗನೇರಿಲ್ಲ ಸಾವಿನ ಸುದ್ದಿ; ಅದೂ ತಂದೆಯವರ ಪರಮಸ್ನೇಹಿತರದು; ಸಹಾಯಕ್ಕಾಗಿ ಟೊಂಕ ಕಟ್ಟಿದವರದು; ತನುಮನಧನಗಳಿಂದ ಡಾಕ್ಟರರ ಕಲ್ಯಾಣ ಬಯಸುವವರದು. ಎಂತಹ ವಿಘ್ನವಿದು ! ಹೊರಟಿರುವದಾದರೊ ದೇಶ ಬಿಟ್ಟು ದೇಶಕ್ಕೆ. ಅಜ್ಞಾತದೇಶ, ವೆಚ್ಚದ ಆಗರ, ಹತ್ತಿರ ಸಾಕಾಗುವಷ್ಟು ಹಣ ವಿಲ್ಲ. ಇನ್ನೇನು ಮಾಡುವುದು ? ಯಾವ ಧೈರ್ಯದ ಮೇಲೆ ಮುಂದಕ್ಕಿಡಬೇಕು ಹೆಜ್ಜೆ ? ತಲೆಯಲ್ಲೆಲ್ಲ ಗೊಂದಲವೇ ಗೊಂದಲವಾಯಿತು ಡಾಕ್ಟರರಿಗೆ. ಕೂಡಲೆ ತಾವು ದೃಢ ಸಂಕಲ್ಪ ಮಾಡಿದ್ದನ್ನು ನೆನೆದು 'ಆದದ್ದಾಗಲಿ, ಬಂದುದಕ್ಕೆ ಎದೆಗೊಟ್ಟು ಅಮೇರಿಕೆಗೆ ಹೋಗಿಯೇ ತೀರುವುದೆಂದು ಮನದಲ್ಲಿ ನಿಶ್ಚಯಿಸಿ ಬಂದ ತಂತಿಯ ಸಂಗತಿಯನ್ನು ಯಾರಿಗೂ ತಿಳಿಸದಲೆ, ಹಾಕಿಬಿಟ್ಟರು ಕಿಸೆಯಲ್ಲಿ; ಮುಗಿಲು ಹರಿದು ಬಿದ್ದರೂ ಮುಂದಿಟ್ಟ ಹೆಜ್ಜೆ ಹಿಂದಿಡಲಾರೆನೆಂದೆಂದುಕೊಂಡರು ಮನದಲ್ಲಿ.

೧೯೧೩ನೆಯ ನೊವೆಂಬರ ೧೧ನೆಯ ದಿನ ಬೆಳಗಿನಲ್ಲಿ ಏರಿದರು ಮೂವರೂ ಫ್ರೆಂಚ ಬೋಟನ್ನು. ಹಡಗವು ಮುಂಬಯಿ ದಂಡೆಬಿಟ್ಟು ಮೆಲ್ಲಮೆಲ್ಲನೆ ಸಮುದ್ರದಲ್ಲಿ ಸಾಗತೊಡಗಿತು. ಅಪಾರವಾದ ಗಂಭೀರ ಸಾಗರ, ಭೋರ್ಗರೆವ ತೆರೆಗಳ ಬಿರುಸರ, ನೀರಿನ ಅಲ್ಲೋಲ ಕಲ್ಲೋಲ; ಸಂಜೆ ಮುಂಜಾವುಗಳಲ್ಲಿ ನೇಸರಿನ ಹೊಂಬಣ್ಣದ ಕಿರಣ ಸೌಂದರ್ಯಗಳನ್ನು ನೋಡುತ್ತ ನಡೆಯಿತು ಪ್ರವಾಸ.

ಕೆಲವು ದಿನಗಳ ನಂತರ ಮಾರ್ಸೆಲ್ಸ್ ಪಾರೀಸಗಳ ಮಾರ್ಗವಾಗಿ ಎಲ್ಲರೂ ಲಂಡನ್ ಸೇರಿದರು. ಲಂಡನ್‌ದವರೆಗೆ ಮೂರನೇ ವರ್ಗದಲ್ಲಿ, ಲಿವರ್‌ಪೂಲದಿಂದ ನ್ಯೂಯಾರ್ಕದ ವರೆಗೆ ಮಾತ್ರ ಎರಡನೇ ವರ್ಗದಲ್ಲಿ ಕುಳಿತು ಹೋದರು. ೫-೬ ದಿನ ಕಳೆದು ನ್ಯೂಯಾರ್ಕಕ್ಕೆ ತಲುಪುತ್ತಿರಲು ಅಲ್ಲಿಯ ಹಿಂದೀ ವಿದ್ಯಾರ್ಥಿಗಳು ಇವರನ್ನು ಸ್ವಾಗತ ಮಾಡಲು ಬಂದಿದ್ದರು.

ಹಿಂದುಸ್ತಾನದಿಂದ ಹೊರಡುವ ಕಾಲಕ್ಕೆ ಹರಡೀಕರರು ಕಂಬಳಿಯ ನಿಲುವಂಗಿ, ಕಲಘಟಗಿಯ ಸಿಂಪಿಗರು ಹೊಲೆಯಬಹುದಾದಂತಹ, ಉತ್ತಮ ಕೋಟು ಚಲ್ಲಣಗಳನ್ನು ನೂರಾರು ರೂಪಾಯಿ ವೆಚ್ಚಮಾಡಿ ಹೊಲಿಸಿ ಸಂಗಡ ತೆಗೆದುಕೊಂಡು ಹೋಗಿದ್ದರು. ನ್ಯೂಯಾರ್ಕಕ್ಕೆ ಹೋಗಿ ತಮ್ಮ ಅರಿವೆಗಳನ್ನು ನೋಡಿಕೊಳ್ಳಲು ಅಲ್ಲಿಯವರ ಇವರ ಅರಿವೆಗಳ ನಡುವೆ ಮಹದಂತರವು ತೋರಹತ್ತಿತು. ಇವರನ್ನು ಕಂಡಲ್ಲೆಲ್ಲ ವಿಲಕ್ಷಣ ಅರಿವೆಗಳನ್ನು ಹಾಕಿಕೊಂಡವರನ್ನು ಕಂಡು ಚೇಷ್ಟೆ ಮಾಡಿ ನಗುವಂತೆ ಅಲ್ಲಿಯ ಜನರು ನಗತೊಡಗಿದರು. ಕೂಡಲೆ ಹರಡೀಕರರು ಹೊಸ ಅರಿವೆಗಳನ್ನು ಕೊಂಡದ್ದಲ್ಲದೆ, ಈ ದೇಶದಿಂದ ಒಯ್ದ ಟೊಪ್ಪಿಗೆ ಬರ್ಫು ಸುರಿಯುತ್ತಿದ್ದಂತಹ ಅಮೇರಿಕೆಯ ಹವೆಗೆ ಏತಕ್ಕೂ ಬರದ್ದರಿಂದ ಕಣ್ಣು ಮೂಗುಗಳಿಗೆ ರಂಧ್ರಗಳನ್ನು ಬಿಟ್ಟು ಸಿದ್ಧ ಮಾಡಿದಂತಹ ಟೊಪ್ಪಿಗೆಯನ್ನು ಕೊಂಡುಕೊಂಡರು.

ನ್ಯೂಯಾರ್ಕದಿಂದ ಶ್ಯಾನ್ ಆರ್ಬರಕ್ಕೆ ಉಗಿಬಂಡಿಯಲ್ಲಿ ಪ್ರವಾಸ ಮಾಡುತ್ತಿರುವಾಗ್ಗೆ ಆದೇ ಬೆಳಕಾಗತೊಡಗಿತ್ತು. ಡಾಕ್ಟರ ಮೊದಲಾದವರು ಎದ್ದು ಕಣ್ಣು ತಿಕ್ಕಿಕೊಳ್ಳುತ್ತ ಎಡಬಲಕ್ಕೆ ನೋಡುವಷ್ಟರಲ್ಲಿ ಎಲ್ಲಿ ನೋಡಿದರೂ ಬೆಳ್ಳನ್ನನೋಟವೇ ಕಾಣತೊಡಗಿತು. ಅಲ್ಲಿಯೇ ಹತ್ತಿರ ಕುಳಿತಿದ್ದ ರೇಲ್ವೆ ಕಂಪನಿಯ ನಿಗ್ರೋ ಮನುಷ್ಯನನ್ನು 'ಇದೇನಪ್ಪಾ ಹೀಗೇಕೆ ಇಲ್ಲಿಯ ಭೂಮಿಯು ಬಿಳುಪಾಗಿದೆ?' ಎಂದು ಡಾಕ್ಟರರು ಕೇಳಿದರು. ಅದಕ್ಕವನು ನಕ್ಕು "ಏಕೆ, ನಿಮಗೆ ಗೊತ್ತೇ ಇಲ್ಲವೇ?" ಎಲ್ಲಿಯವರು ನೀವು! ಇದು ಬರ್ಫ. ನೆಲವೆಲ್ಲ ಅದರಿಂದ ಮುಚ್ಚಿಹೋಗಿದೆ" ಎಂದು ಹೇಳಿದ. ತಮ್ಮ ಅಜ್ಞಾನವು ವ್ಯಕ್ತವಾದದ್ದಕ್ಕೆ

ಡಾಕ್ಟರರಿಗೆ ನಾಚಿಕೆಯಾಯಿತು. ಗಾಡಿಯು ನಡೆಯಿತು ಮುಂದಕ್ಕೆ. ದಾರಿಯಲ್ಲಿ ನಾಯಗಾರಾ ತಡಸಲವು ಹತ್ತಲು ಅದನ್ನು ನೋಡಬೇಕೆಂದು ಎಲ್ಲರೂ ಇಳಿದರು. ನಿಲ್ಮನೆಯಿಂದ ಒಂದು ಮೈಲಿನಷ್ಟು ನಡೆದು ಹೋಗಬೇಕಾಗಿತ್ತು. ಅಷ್ಟು ದೂರ ಹೋಗುವದರೊಳಗೆ ಎಲ್ಲರೂ ೧೦-೨೦ ಸಲ ಜಾರಿಬಿದ್ದರು. ನಮ್ಮ ನಾಡಿನಲ್ಲಿ ಉಪಯೋಗಿಸುವ ಬೂಟುಗಳನ್ನು ಹಾಕಿದ್ದರಿಂದ ಇವರ ಗತಿ ಹೀಗಾಯಿತಂತೆ. ಬರ್ಫದ ಮೇಲೆ ನಡೆಯುವದಕ್ಕೆ ತಳಕ್ಕೆ ಮೊಳೆಗಳನ್ನು ಹೊಡೆದ ಅಥವಾ ರಬ್ಬರ್ ಹಚ್ಚಿದ ಬೂಟುಗಳನ್ನು ಉಪಯೋಗಿಸಬೇಕಾಗುವದು, ಇಲ್ಲವೆ ಬೂಟುಗಳ ಮೇಲೆ ರಬ್ಬರಿನ ಹೊದಿಕೆಗಳನ್ನು ಹಾಕಿ ನಡೆಯಬೇಕಾಗುವದು. ಈ ಅನುಭವದ ನಂತರ ಇವರೆಲ್ಲ ಅದೇ ತರಹದ ಬೂಟುಗಳನ್ನೇ ಕೊಂಡುಕೊಂಡರು.

ನ್ಯೂಯಾರ್ಕವನ್ನು ಮುಟ್ಟಿದ ಕಾಲಕ್ಕೆ ನಾತಾಳಿ ಹಬ್ಬ ನಡೆದಿತ್ತು. ಅದಕ್ಕಾಗಿ ಒಂದು ವಾರವನ್ನು ಕಳೆದು ಮಿಚಿಗಾನಕ್ಕೆ ಹೊರಟರು. ಅಮೇರಿಕೆಯ ಸಂಯುಕ್ತ ಪ್ರಾಂತದಲ್ಲಿ ಪ್ರತಿಯೊಂದು ಸ್ಟೇಟಿಗೆ ಒಂದೊಂದು ವಿಶ್ವವಿದ್ಯಾಲಯವು, ಅದಕ್ಕೆ ಅಂಕಿತವಾಗಿ ಕೆಲವು ಕಾಲೇಜುಗಳು ಇರುತ್ತವೆ. ಹಿಂದೆ ಪತ್ರವ್ಯವಹಾರ ಮಾಡಿದಾಗ್ಗೆ ಇಂತಹ ೧೦ ವಿಶ್ವ ವಿದ್ಯಾಲಯುಗಳಿಗೆ ತಮ್ಮ ಯೋಗ್ಯತೆಯನ್ನು ತಿಳುಹಿಸಿ ಪ್ರವೇಶಕ್ಕೆ ಅಪ್ಪಣೆ ಕೇಳಿದ್ದರು. ಅವುಗಳಲ್ಲಿ ೩-೪ ವಿದ್ಯಾಪೀಠದವರು ಪ್ರವೇಶಕ್ಕೆ ಅಪ್ಪಣೆ ಕೊಟ್ಟಿದ್ದರು. ಅವುಗಳಲ್ಲಿ ಮಿಚಿಗಾನ ಸಂಸ್ಥಾನದ ಆ್ಯನ್ ಆರ್ಬರ ವಿದ್ಯಾಪೀಠದಲ್ಲಿ ಇವರೆಲ್ಲ ಅಭ್ಯಾಸಕ್ಕೆ ನಿಂತರು.

ಆ್ಯನ್ ಆರ್ಬರದಲ್ಲಿ ಒಂದು ವರ್ಷ ಅಭ್ಯಾಸ ಮಾಡುತ್ತಿರಲು ಡಾ. ನಾಡಗೀರರಿಗೆ ಕ್ಷಯ ರೋಗವು ಅಂಟಿಕೊಂಡಿತು. ಅವರು ಹಿಂದು ಸ್ಥಾನಕ್ಕೆ ಮರಳಿದರು. ಇಲ್ಲಿಗೆ ಬಂದಬಳಿಕ ಸಹ ಅವರ ಬೇನೆಯು ಕಡಿಮೆಯಾಗದೆ ದಿನದಿನಕ್ಕೆ ಬೆಳೆಯಹತ್ತಿತು. ಕೊನೆಗೆ ಅವರು ೧೯೧೫ ರಲ್ಲಿ ಸ್ವರ್ಗಸ್ಥರಾದರು.

ಇತ್ತ ಡಾ. ಹರಡೀಕರರು ಮೂರು ವರ್ಷಗಳ ವರೆಗೆ ಅಭ್ಯಾಸ

ಮಾಡಿ ಎಮ್. ಎಸ್. (Master of Science) ಎಂಬ ಪದವಿಯನ್ನು ಪಡೆದು ಪಿ. ಎಚ್. ಡಿ. ಡಿಗ್ರಿಯನ್ನು ತೆಗದುಕೊಳ್ಳಬೇಕೆಂದು ರಾಜಕಾರಣ-ಅರ್ಥಶಾಸ್ತ್ರವನ್ನು ಅಭ್ಯಾಸ ಮಾಡಲು ಕ್ಯಾನ್ ಆರ್ಬರದಿಂದ ಖಂ೦ಮೈಲು ಅಂತರದ ಮೇಲಿದ್ದ ಇಲಿನಾಯ್ ಸಂಸ್ಥಾನದ ಅರ್ಬಾನಾ ವಿಶ್ವವಿದ್ಯಾಲಯಕ್ಕೆ ಹೋದರು. ಅಂಕ್ಲೀಕರರು ಕ್ಯಾನ್ ಆರ್ಬರದಲ್ಲಿಯೇ ಉಳಿದರು.

# ಅಮೇರಿಕೆಯಲ್ಲಿ

**' ನಮ್ಮದೋ ನಮ್ಮದೀ ಭರತಭೂಮಿ '** ಎಂಬರಿವಿಲ್ಲದಾಗ **' ನನ್ನದು ಈ ಕನ್ನಡನಾಡು '** ಎಂದಾರಿಗೆನಿಸಬೇಕು ? ತಾಯಿ ನುಡಿ ಯಿಂದ ತನ್ನ ನಾಡಿನ ಗೊತ್ತು. ತಾಯಿ ನುಡಿ ಕನ್ನಡವಾದರೆ ತನ್ನದು ಕನ್ನಡ ನಾಡು; ಮರಾಠಿಯಾದರೆ ತನ್ನದು ಮಹಾರಾಷ್ಟ್ರನಾಡು, ಎಂದು ಹುಡುಗರಿರುವಾಗ ತಿಳಿಯುವದು ಸಹಜ. ಡಾ. ಸರಡೀಕರರ ಮಾತೃಭಾಷೆ ಮರಾಠಿಯಾದ್ದರಿಂದ ಚಿಕ್ಕಂದಿನಲ್ಲಿ ತಾವು ಮಹಾ ರಾಷ್ಟ್ರೀಯರೆಂದೇ ಅವರು ತಿಳಿದಿದ್ದರು. ಕೇಸರಿ ಮೊದಲಾದ ವೃತ್ತ ಪತ್ರಗಳನ್ನು ಓದಿದುದು ಈ ಭಾವನೆಗೆ ಇನ್ನಿಷ್ಟು ಪುಷ್ಟಿಯನ್ನು ಕೊಟ್ಟಿ ರಲು ಸಾಕು. ಕಲಕತ್ತೆಗೆ ವಿದ್ಯಾರ್ಜನೆಗಾಗಿ ಹೋದಾಗ ಮೊದಲು ಅವರಿದ್ದುದು ಮಹಾರಾಷ್ಟ್ರಮಂಡಲದಲ್ಲಿಯೇ. ಇವೆಲ್ಲ ಕಾರಣಗಳಿಂದ ಅವರು ಅಮೇರಿಕೆಯಲ್ಲಿ ತಳವೂರಿದ ಕೂಡಲೇ ಮಹಾರಾಷ್ಟ್ರಮಂಡಲ ವನ್ನೇ ಸ್ಥಾಪಿಸಿದರು. ಎಲ್ಲ ದಕ್ಷಿಣ ಹಿಂದುಸ್ಥಾನದ ಜನರನ್ನು ಒಟ್ಟು ಗೂಡಿಸುವುದು, ಅವರಲ್ಲಿ ಪರಸ್ಪರ ಸಹಕಾರ, ಪ್ರೇಮ, ಸಂಘಟನೆಗಳ ನ್ನುಂಟು ಮಾಡುವುದು, ಈ ಮಂಡಲದ ಉದ್ದೇಶವಾಗಿತ್ತು. ಕೇಸರಿ, ಜ್ಞಾನಪ್ರಕಾಶ, ಚಿತ್ರಮಯಜಗತ್ತುಗಳು ಪುಕ್ಕಟೆಯಾಗಿ ಡಾಕ್ಟರರ ಹೆಸರಿಗೆ ಬರುತ್ತಿದ್ದವು. ಇವರೇ ಈ ಮಂಡಲದ ಅಧ್ಯಕ್ಷರಾದರು. ಇಂದೂರಿನ ಶ್ರೀ. ಶೇವಡೆಯವರು ಅದರ ಕಾರ್ಯದರ್ಶಿಗಳಾದ್ದರು. ಡಾ. ವಾಮನರಾವ ಕೊಕಟನೂರ ಹಾಗೂ ಡಾ. ಜಿ. ಎಮ್ ಚಿಪಳೂಣ ಕರ ಇವರು ಮಿನಿಸೋಟಾ ಸಂಸ್ಥಾನದ ಮಿನಿಯಾ ಪೊಲೀಸ ವಿಶ್ವ ವಿದ್ಯಾಲಯದಲ್ಲಿ ಓದುತ್ತಿದ್ದರು. ಹರಡೀಕರರು ಮಿನಿಯಾಪೊಲೀಸಕ್ಕೆ



ಅಮೇರಿಕೆಯಲ್ಲಿ ಭಾಷಣಕಾರರು

ಹೋಗಿ ಅವರೊಡನೆ ಮಾತನಾಡಿ ಮಹಾರಾಷ್ಟ್ರಮಂಡಲವನ್ನು ಸ್ಥಾಪಿಸಿದರು.

ಇವರ ಮಾತಿನ ಚತುರತೆ, ಕಾರ್ಯದಕ್ಷತೆ, ಜಾಣತನದ ಯೋಗ್ಯತೆ ತಿಳಿದು ಮಿಚಿಗಾನ್ ವಿಶ್ವವಿದ್ಯಾಲಯದವರು ೧೯೧೬ ರಲ್ಲಿ ಇವರನ್ನು ಪ್ರವಾಸೀ ಭಾಷಣಕಾರರೆಂದು (extention lecturer) ನಿಯಮಿಸಿ ಕೊಂಡರು. ವಿಷಯ, ಹಿಂದುಸ್ಥಾನ ಹಾಗೂ ಉಳಿದ ದೇಶಗಳ ವಿಷಯಕ್ಕೆ ವ್ಯಾಖ್ಯಾನ ಕೊಡುವದಾಗಿತ್ತು. ಸರಿ, ಇವರಿಗೆ ಬೇಕಾದುದೇನು? ಬೇಡಿದುದನ್ನು ಹುಡುಕುವಷ್ಟರಲ್ಲಿ ಅಡಿಯಲ್ಲಿಯೇ ಕಂಡಂತಾಯಿತು. ಹುರಿಗೊಂಡರು. ತಾಯಿನಾಡಿನ ಮಹಿಮೆಯನ್ನು ಪರದೇಶಗಳಲ್ಲಿ ಹರಡಲು ತಾನಾಗಿ ನಡೆದು ಬಂದ ಈ ಪ್ರಸಂಗವನ್ನು ಚನ್ನಾಗಿ ಉಪಯೋಗ ಮಾಡಿಕೊಳ್ಳಬೇಕೆಂದು ನಿರ್ಧರಿಸಿ ಕೂಡಲೆ ಹಿಂದುಸ್ಥಾನದ ರಾಜಕೀಯ ಆರ್ಥಿಕ ಇತಿಹಾಸಗಳನ್ನು ಮನಮುಟ್ಟಿ ಅಭ್ಯಾಸಮಾಡಿ ಭಾಷಣಕ್ಕೆ ಸಿದ್ಧರಾದರು. ಬೇರೆ ಬೇರೆ ಊರು, ಸಂಸ್ಥೆ, ಸಂಘಗಳಿಂದ ಕರವು ಬರತೊಡಗಿತು. ವಾರಕೊಂದು ಭಾಷಣ, ಇಲ್ಲವೆ ಹೆಚ್ಚು. ಭಾಷಣಗಳಲ್ಲದೆ ಲೇಖನವನ್ನೂ ಪ್ರಾರಂಭಿಸಿದರು. ಇದೆಲ್ಲ ಮಾಡುತ್ತ ಕಾಲೇಜದ ಅಭ್ಯಾಸವನ್ನು ನಡೆಯಿಸಿಯೇ ಇದ್ದರು.

೧೯೧೫ರಲ್ಲಿ ಅಮೇರಿಕೆಯಲ್ಲಿರುವ ಹಿಂದುಸ್ಥಾನದ ಎಲ್ಲ ವಿದ್ಯಾರ್ಥಿಗಳು '**ಅಮೇರಿಕೆಯ ಹಿಂದೀ ವಿದ್ಯಾರ್ಥಿಗಳ ಸಂಘ**' (Hindustan Association of America) ವನ್ನು ಸ್ಥಾಪಿಸಿ ಈ ಸಂಘದಿಂದ 'ಹಿಂದುಸ್ಥಾನೀ ಸ್ಟೂಡಂಟ್' ಎಂಬ ಮಾಸಿಕ ಪುಸ್ತಕವನ್ನು ಪ್ರಕಟಿಸುತ್ತಿದ್ದರು. ೧೯೧೬ರಲ್ಲಿ ಡಾ. ಹರಡೀಕರರು ಈ ಸಂಘದ ಅಧ್ಯಕ್ಷರಾಗಿದ್ದರು.

ಇಷ್ಟರಲ್ಲಿ ಅಮೇರಿಕೆಯ ಕಾಂಗ್ರೆಸ್ಸಿನ ಮುಂದೆ ಹಿಂದೀ ಜನರಿಗೆ ಅಮೇರಿಕಾ ದೇಶವನ್ನು ಪ್ರವೇಶಿಸಲಿಕ್ಕೆ ನಿರ್ಬಂಧವಿರಬೇಕು, ಎಂಬರ್ಥದ ವಿಷಯವು ಬಂದಿತು. ಅದನ್ನು ಕೇಳಿ ಡಾಕ್ಟರರು ಸಿಡಿಮಿಡಿಗೊಂಡು ಹೇಗಾದರೂ ಹೋರಾಡಿ ಅದನ್ನು ತಪ್ಪಿಸಬೇಕೆಂದು ಯೋಚಿಸಹತ್ತಿದರು. ಕಾಂಗ್ರೆಸ್ಸಿನ ಸಭಾಸದರಿಗೆ ತಿಳುಹಿಸಿ ಹೇಳಲು ಅಸಾಮಾನ್ಯ

ನಾದೊಬ್ಬ ವ್ಯಕ್ತಿಯೂ ಬೇಕಾಗಿತ್ತು. ಯಾರು ಸಿಗಬೇಕಲ್ಲಿ? ಸುದೈವ ದಿಂದ ಆದೇ ಹೊತ್ತಿಗೆ ಪಂಜಾಬಸಿಂಹ **ಲಾಲಾಲಜಪತರಾಯರು** ಪರ ದೇಶಗಳಲ್ಲಿ ಹಿಂದುಸ್ಥಾನದ ವಿಷಯವಾಗಿ ನಿಜವಾದ ಜ್ಞಾನವನ್ನುಂಟು ಮಾಡುವ ಉದ್ದೇಶದಿಂದ ಅಮೇರಿಕಾ ದೇಶಕ್ಕೆ ಬಂದಿದ್ದರು. ಅವರ ಭಾಷಣ ಲೇಖಗಳ ಮೂಲಕ ಅವರ ವಿಷಯವಾಗಿ ಜನರಲ್ಲಿ ಬಹಳ ಆದರ ವುಂಟಾಗಿತ್ತು. ಕೂಡಲೆ ಅಮೇರಿಕೆಯ ಕಾಂಗ್ರೆಸ್ಸಿನ ಮುಂದೆ ಬಂದಂತಹ, ಹಿಂದೀ ಜನರ ಸಂಬಂಧವಾಗಿದ್ದ ಅನ್ಯಾಯದ ವಿಷಯವನ್ನು ಹರಡೀ-ಕರರು ಲಾಲಾಜಿಯವರಿಗೆ ತಿಳಿಸಿ ಉಪಾಯವನ್ನು ಕೇಳಿದರು. ಲಜಪತರಾಯರು ಆದೇ ಇಂಗ್ಲಂಡಿನಿಂದ ಬಂದಿದ್ದು ಜಪಾನಕ್ಕೆ ಹೋಗು ವವರಿದ್ದುದರಿಂದ, ಆ ವಿಷಯದಲ್ಲಿ ಅವರಿಂದ ವಿಶೇಷವಾಗಿ ಏನೂ ಮಾಡುವುದು ಸಾಧ್ಯವಾಗಲಿಲ್ಲ.

ಇತ್ತ ಮಹಾಯುದ್ಧವು ನಡೆದದ್ದರಿಂದ ಲಾಲಾಜಿಯಂತಹ ಬಲಾಢ್ಯ ಮುಂದಾಳು ಹಿಂದುಸ್ಥಾನಕ್ಕೆ ಹೋದಲ್ಲಿ ಗೊಂದಲವೆಬ್ಬಿಸ ಬಹುದೆಂದು, ಸರಕಾರದವರು ಅವರಿಗೆ ಹಿಂದುಸ್ಥಾನಕ್ಕೆ ತಿರುಗಿ ಹೋಗು ವದಕ್ಕೆ ಅಪ್ಪಣೆಕೊಡಲಿಲ್ಲ. ಕಾರಣ ೧೯೧೬ರಲ್ಲಿ ಲಾಲಾಜಿಯವರು ಜಪಾನದಿಂದ ತಿರುಗಿ ಬಂದರು. ಇಲ್ಲದಿದ್ದರೆ ಜಪಾನದಿಂದಲೇ ಅವರು ಹಿಂದುಸ್ಥಾನಕ್ಕೆ ಹೋಗುವವರಿದ್ದರು. ಅತ್ತ ಅಮೇರಿಕೆಯಲ್ಲಿ ಹಿಂದು ಸ್ಥಾನದ ವಿರುದ್ಧವಾಗಿ ಪ್ರಚಾರಕಾರ್ಯಗಳು ಬ್ರಿಟಿಶ ಸರಕಾರದವರ ವತಿಯಿಂದಲೆ ವ್ಯವಸ್ಥೆಯಾಗುತ್ತಿದ್ದವಂತೆ. ಹೀಗೆ ಅಮೇರಿಕೆಯಲ್ಲಿ ಹಿಂದುಸ್ಥಾನದ ವಿರುದ್ಧವಾಗಿ ಉಂಟಾದ ಪರಿಸ್ಥಿತಿಯನ್ನು ಎದುರಿಸಿ, ಅನುಕೂಲ ವಾತಾವರಣವನ್ನುಂಟುಮಾಡುವದಕ್ಕಾಗಿ ಒಂದು ಸಂಸ್ಥೆ ಯನ್ನು ಸ್ಥಾಪಿಸುವದು ಅವಶ್ಯವಿದೆ; ಸರಕಾರದವರು ತಮ್ಮನ್ನು ಹಿಂದುಸ್ಥಾನಕ್ಕೆ ಹೋಗಗೊಡುವವರೆಗೆ ಆ ಕಾರ್ಯವನ್ನು ಮಾಡುವೆ ನೆಂದು ಲಾಲಾಜಿಯವರು ಡಾ. ಹರಡೀಕರರಿಗೆ ಪತ್ರಬರೆದರು. ಹಿಂದು ಸ್ತಾನ ಅಸೋಸಿಯೇಶನ್ನದ ಅಧ್ಯಕ್ಷಸ್ಥಾನದ ವತಿಯಿಂದ ಚಿಕಾಗೋ ಪಟ್ಟಣದಲ್ಲಿ ಎಲ್ಲ ಹಿಂದೀ ವಿದ್ಯಾರ್ಥಿ ಪ್ರತಿನಿಧಿಗಳ ಸಭೆಯನ್ನು ಕರೆದು ಡಾಕ್ಟರರು ಆದರ ಮುಂದೆ ಲಾಲಾಜಿಯವರ ಸೂಚನೆಯನ್ನಿಟ್ಟರು.

ಎಲ್ಲರೂ ಎರಡು ದಿವಸಗಳವರೆಗೆ ಆ ವಿಷಯವಾಗಿ ಚರ್ಚೆಮಾಡಿ ಕೊನೆಗೆ ಇಂತಹದೊಂದು ಸಂಸ್ಥೆಯನ್ನು ಸ್ಥಾಪಿಸತಕ್ಕದ್ದೆಂದು ನಿರ್ಣಯಮಾಡಿದರು.

ಈ ಸಂಸ್ಥೆಯ ಕಾರ್ಯವನ್ನು ಸಾಗಿಸುವದಕ್ಕಾಗಿ ಲಾಲಾಜಿಯವರಿಗೆ ಒಬ್ಬ ಉತ್ತಮ ಉತ್ಸಾಹೀ ತರುಣನ ಅವಶ್ಯಕತೆಯಿತ್ತು. ಅದಕ್ಕಾಗಿ ಅವರು ಡಾ. ಹರಡೀಕರರನ್ನು ಕರೆದು 'ನೀನು ಬಂದರೆ ಸಂಸ್ಥೆಯನ್ನು ಪ್ರಾರಂಭಿಸುವೆ. ಇಲ್ಲವಾದರೆ ಇಲ್ಲ' ಎಂದು ಹೇಳಿದರು. '**೨೪** ತಾಸಿನ ಅವಧಿಯನ್ನು ಕೊಡಿರಿ. ವಿಚಾರ ಮಾಡಿ ನಿಮಗೆ ಏನಾದರೊಂದು ಉತ್ತರವನ್ನು ಕೊಡುವೆ' ಎಂದರು ಡಾಕ್ಟರರು. ಹಾಗೇ ಆಗಲೆಂದು ಲಾಲಾಜಿಯವರೆಂದ ಬಳಿಕ ಡಾಕ್ಟರರು ಡಾ. ಅಂಕಲೀಕರರೊಡನೆ ಚರ್ಚೆ ಮಾಡಿ, ತಾವು ಸ್ವತಃ ಆಳವಾಗಿ ವಿಚಾರಮಾಡಿ 'ಈ ಪ್ರಸಂಗವನ್ನು ಕಳೆದುಕೊಂಡು ಉಪಯೋಗವಿಲ್ಲ. ನಾನು ಅಮೇರಿಕೆಗೆ ಬಂದ ಉದ್ದೇಶವೇನೋ ಶಿಕ್ಷಣವಾಗಿದ್ದರೂ, ಇಲ್ಲಿಯೂ ಮಾತೃಭೂಮಿಯ ಸೇವೆ ಜರಗುವದೆಂದರೆ ನನ್ನ ಸುದೈವವೆನ್ನಬೇಕು. **ಶಿಕ್ಷಣ ಪಡೆಯುವದಾದರೂ ಏತಕ್ಕೆ? ಡಿಗ್ರಿ ಶಿಕ್ಷಣದಿಂದ ದೇಶಕಾರ್ಯದ ಕಲ್ಪನೆ ಬರಬಹುದೇ?** ನಾಡಿಗಾಗಿ ನನ್ನ ಜೀವನವನ್ನೇ ಮುಡುಪಿಡುವಾಗ ನಾಡಸೇವೆಯ ಶಿಕ್ಷಣವೇ ಸಿಗುವುದನ್ನು ಬಿಡುವುದುಂಟೇ? ಈಗ ಪಡೆದ ಡಿಗ್ರಿ ಸಾಕು. ಲಾಲಾಜಿಯಂತಹ ಅನುಭವಿಕ-ಅಪ್ರತಿಮ ರಾಜಕಾರಣಿಯ ಕೈಯಲ್ಲಿ ಕೆಲಸ ಮಾಡುವದೆಂದರೆ ಇದೊಂದು ಯೋಗಾಯೋಗವೆನ್ನಬೇಕು. ಇದರಿಂದ ನನ್ನ ಜೀವನಕ್ಕೊಂದು ಹೊಸ ಚೈತನ್ಯವು ಬರದಿರದು. ಸಾಕಿಲ್ಲಿಗೆ ನನ್ನ ವಿದ್ಯಾಲಯದ ವಿದ್ಯಾರ್ಥಿ ಜೀವನವೆಂದು ಬಗೆದು 'ನಿಮ್ಮೊಡನೆ ನಾನು ಬರಲು ಸಿದ್ಧ' ಎಂದು ತಮ್ಮ ನಿಶ್ಚಿತವಾದ ನಿರ್ಧಾರವನ್ನು ಹೇಳಿಬಿಟ್ಟರು. ಲಾಲಾಜಿಯವರು ಆನಂದಿತರಾಗಿ '**ಏಳು ಹಾಗಾದರೆ ಕಟ್ಟು ಗ್ರಂಥವ**' ಎಂದರು. ಕೂಡಲೇ ಅಲ್ಲಿಂದ ಕಿತ್ತಿಕೊಂಡು ಹೋಗುವದು ಡಾಕ್ಟರರಿಗೆ ಸಾಧ್ಯವಿರಲಿಲ್ಲ. 'ತಿಂಗಳೆರಡು ತಿಂಗಳಲ್ಲಿ ಎಲ್ಲ ಸಂಬಂಧಗಳನ್ನು ಕಡಿದುಕೊಂಡು ನಿಮ್ಮನ್ನು ಬಂದು ಕೂಡುವೆ' ಎಂದರು. ಅದೇ ಪ್ರಕಾರ ಸರಿಯಾಗಿ

ಮುಂದೆರಡು ತಿಂಗಳಲ್ಲಿ ೧೯೧೬ನೆಯ ಇಸ್ವಿಯ ಸವ್ಹೆಂಬರ ತಿಂಗಳಲ್ಲಿ ನ್ಯೂಯಾರ್ಕ್ ಪಟ್ಟಣಕ್ಕೆ ಹೋಗಿ ಲಜಪತರಾಯರ ಕಾರ್ಯದಲ್ಲಿ ಸಹಾಯ ಮಾಡತೊಡಗಿದರು. ಇಲ್ಲಿಗೇ ಅವರ ವಿದ್ಯಾರ್ಥಿ ಜೀವನವು ಮುಗಿಯಿತು.

ಹಿಂದುಸ್ಥಾನದ ಕಲ್ಯಾಣಕ್ಕಾಗಿ ದುಡಿಯಬೇಕಾದ ಸಂಸ್ಥೆಯನ್ನು ಲಾಲಾಜಿಯವರು ಕೂಡಲೆ ಪ್ರಾರಂಭಿಸಿ ಅದಕ್ಕೆ **ಇಂಡಿಯನ್ ಹೋಮ್‌ರೂಲ್ ಲೀಗ್ ಆಫ್ ಅಮೇರಿಕಾ** ಎಂಬ ಹೆಸರನ್ನಿಟ್ಟರು. ಇದರ ಅಧ್ಯಕ್ಷರು ಲಾಲಾಜಿಯವರು. ಉಪಾಧ್ಯಕ್ಷರು **ಡಾ. ಸಂಡರ್ಲಂಡರು.** ಸಂಘಟಕ ಕಾರ್ಯದರ್ಶಿಗಳು ಡಾ. ಶಾಸ್ತ್ರಿಯವರು. ಸಾಮಾನ್ಯಕಾರ್ಯದರ್ಶಿಗಳು ಡಾ. ಹರಡೀಕರರಾದರು. 'ಯಂಗ್ ಇಂಡಿಯಾ' ಮಾಸಿಕವು ಈ ಸಂಸ್ಥೆಯಿಂದ ಹೊರಡತೊಡಗಿತು. ಸಂಪಾದಕರು ಲಾಲಾಜಿಯವರು, ವ್ಯವಸ್ಥಾಪಕ ಸಂಪಾದಕರು ಡಾ. ಹರಡೀಕರರು. ಅಮೇರಿಕೆಯ ಜನರ ಸಹಾಯದಿಂದ ಸ್ವರಾಜ್ಯ ಸಂಘದ ಶಾಖೆಗಳನ್ನು ಅಲ್ಲಲ್ಲಿ ಸ್ಥಾಪಿಸಿದರು. ವಿವೇಕಾನಂದ, ಟಾಗೋರ, ಗಾಂಧಿ ಕೇಂದ್ರಗಳು ಸ್ಥಾಪಿತವಾಗಿದ್ದವು. ಇವುಗಳಿಂದ ಹಣ ಕೂಡಿಸತೊಡಗಿದರು. ಹೋಮ್‌ರೂಲ್ ಲೀಗದ ಪ್ರಚಾರಕಾರ್ಯಕ್ಕಾಗಿ ಅಮೇರಿಕೆಯ ೪೮ ಸಂಸ್ಥಾನಗಳಲ್ಲಿ ೪೦ ಸಂಸ್ಥಾನಗಳ ಸಣ್ಣ ದೊಡ್ಡ ಪಟ್ಟಣಗಳನ್ನು ಡಾಕ್ಟರರು ಸಂದರ್ಶಿಸಿ, ಹಿಂದುಸ್ಥಾನದ ವಿಷಯಕ್ಕೆ ಜನರಲ್ಲಿ ಜ್ಞಾನವನ್ನುಂಟು ಮಾಡಿದರು.

ಅವರವರ ನಾಡೆಂದರೆ ಅವರವರಿಗೆ ಪ್ರೇಮ. ತಿಳಿದವರು ತಮ್ಮ ನಾಡಿನ ಹಿತಕ್ಕೆ ತಾವು ದುಡಿಯತಕ್ಕವರೆ. ನಾಡಿನ ಮಾನ ತಮ್ಮ ಮಾನ; ನಾಡಿನ ಸಂಪತ್ತು ತಮ್ಮ ಸಂಪತ್ತು; ನಾಡಿನ ದೈವ ತಮ್ಮ ದೈವವೆಂದು ತಿಳಿದು, ಮೈ ಮಾತು ಮನಗಳಿಂದ ದುಡಿದ ಜನರೇ ನಾಡಿನೇಳ್ಗೆಯ ಮಾಡಿದವರು. ಇನ್ನು ತಮ್ಮ ನಾಡಿನ ಹಿತಕ್ಕಾಗಿ ಪರನಾಡನ್ನು ಪಾರತಂತ್ರ್ಯದಲ್ಲಿ ಮೆಟ್ಟುವ ನಾಡಹಿತವಂತರೂ ದೇಶಸೇವಕರೇ! ಕಷ್ಟಪಟ್ಟು ಗಳಿಸಿದ್ದನ್ನು ಕೈ ಬಿಡಲು ಯಾರು ಸಿದ್ಧರು? ಅದೂ ತಮ್ಮ ನಾಡಿನ ಸುಖಕ್ಕಾಗಿ ಗಳಿಸಿದ್ದನ್ನು ಬಿಟ್ಟು ಬಿಡುವದೆಂದರೆ ಕಷ್ಟವನ್ನು

ಕರೆಕಳುಹಿದಂತಲ್ಲವೆ? ಬ್ರಿಟಿಶರು ಭಾರತವನ್ನು ವಶಪಡಿಸಿಕೊಂಡುದು ಏತಕ್ಕೆ? ಬಿಟ್ಟುಕೊಡುವುದಕ್ಕೆಯೆ? ಅದು ಕೈಬಿಟ್ಟು ಹೋಗುವಂತೆ ಯಾರಾದರೂ ಯತ್ನಿಸಿದರೆ, ಅದನ್ನು ವಿರೋಧಿಸುವುದು ಅವರ ನಾಡಸೇವೆಯೇ ಸರಿ. ಲಾಲಾಜಿಯವರೂ ಹರಡೀಕರರೂ ತಮ್ಮ ಕೆಲಸ ಮಾಡುವಾಗೆಲ್ಲ ಈ ದೇಶಭಕ್ತರ !ಸಂಚಿಗೆ ಹಂಚಿಕೆಯನ್ನು ಮಾಡಲೇಬೇಕಾಗುತಿತ್ತು. ಥಿಯಾಸೊಫಿಕಲ್ ಸೊಸೈಟಿ, ಲೇಬರ್ ಯೂನಿಯನ್, ಸೊಸಿಯಾಲಿಸ್ಟಿಕ್ ಗ್ರುಪ್, ಆರಿಸ್ಟಾಕ್ರೆಟಿಕ್ ಅಗ್ಯಾನಿಝೇಶನ್, ಹಿಂದುಸ್ತಾನೀ ಸ್ಟೂಡಂಟ್ಸ್, ಆಯರಿಶ್ ಆಗ್ಯಾನಿಝೇಶನ್, 'ಇವೆಲ್ಲ ಸಂಸ್ಥೆಗಳು ಎಲ್ಲ ಕಡೆಗೂ ಇರುತ್ತಿದ್ದವು. ಅವುಗಳ ಸಹಾಯದಿಂದ ಅಲ್ಲಲ್ಲಿ ಸಭೆಗಳನ್ನು ಸೇರಿಸಿ ಹಿಂದುಸ್ತಾನದ ಸಂದೇಶವನ್ನು ಎಲ್ಲರಿಗೂ ಮುಟ್ಟಿಸುತ್ತಿದ್ದರು. ಹೀಗೆ ನೂರಾರು ಸಭೆಗಳನ್ನು ಕರೆದು, ಲಕ್ಷಾಂತರ ಹಸ್ತ ಪತ್ರಿಕೆಗಳ ಹಂಚಿ, ಅವುಗಳನ್ನೇ ಭಾಷಾಂತರಿಸಿ, ಅಮೇರಿಕೆಯಲ್ಲಿಯು, ಯುರೋಪದ ವೃತ್ತ ಪತ್ರಗಳಲ್ಲಿ ಮುದ್ರಿಸುವ ವ್ಯವಸ್ಥೆ ಮಾಡುತ್ತಿದ್ದರು. ಹೋಂರೂಲ್ ಲೀಗದಿಂದ ಪ್ರಸಿದ್ಧಿಸಿದ ಹಸ್ತಪತ್ರಿಕೆಗಳಲ್ಲಿ '**ಸ್ಮಶಾನವತ್ ಹಿಂದುಸ್ಥಾನ**' (India a grave yard) ಎಂಬುದೊಂದಾಗಿತ್ತು. ಇದು ಎಲ್ಲ ಕಡೆಗೂ ಬಹು ಪ್ರಸಿದ್ಧಿಯನ್ನು ಹೊಂದಿ, ಯುರೋಪದ, ಹಿಂದುಸ್ತಾನದ ಎಲ್ಲ ಭಾಷೆಗಳಲ್ಲಿ ಭಾಷಾಂತರಿತವಾಯಿತು.

೧೯೧೭ನೆಯ ಇಸ್ವಿಯಲ್ಲಿ ಕಾನಡಾದೇಶದ ಹಿಂದೀ ಜನರು ಟಾಗೋರರಿಗೆ ಆಮಂತ್ರಣವಿತ್ತರು. ಆದರೆ ಅವರು ಬರಲಿಲ್ಲ. ಮರು ವರ್ಷ ಕರೆದರು. ಆಗೂ ಬರಲಿಲ್ಲ. ೧೯೧೮ರಲ್ಲಿ ಲಜಪತರಾಯರನ್ನು ಕರೆದರು. ಲಾಲಾಜಿಯವರು ಡಾಕ್ಟರರಿಗೆ 'ಕಾನಡಾಕ್ಕೆ ನೀನೇ ಹೋಗಿ ಬಾ' ಎಂದರು. ಕೂಡಲೆ ಡಾಕ್ಟರರು ಅಲ್ಲಿಗೆ ಹೋಗಿ ಅಲ್ಲಿಯ ೮ ಸಂಸ್ಥಾನಗಳಲ್ಲಿ ೬ನ್ನು ಸಂದರ್ಶಿಸಿ ಅಲ್ಲಿಯ ಜನರಿಗೆ ಹಿಂದುಸ್ತಾನದ ಸಂಗತಿಗಳನ್ನು ವಿಶದವಾಗಿ ತಿಳಿಸಿದರು. ಕಾನಡಾ ದೇಶದ ಪಶ್ಚಿಮ ಭಾಗದಲ್ಲಿ ಕೋಲಂಬಿಯಾ ದೇಶವಿರುತ್ತದೆ. ಅಲ್ಲಿ ಹಿಂದೂ ಜನರ ವಿಷಯವಾಗಿ ವಾದಗ್ರಸ್ತ ಪ್ರಶ್ನೆಗಳಿದ್ದವು. ಪರಿಸ್ಥಿತಿಯು ಭೀಕರವಾಗಿತ್ತು. ಹೆಚ್ಚು ಕಡಿಮೆಯಾದರೆ ಹಿಂದಿಗಳ ಪರವಾಗಿ ಬಂದವರನ್ನು ಬಡಿಯುವಷ್ಟು

ಸಿದ್ಧತೆಯು ವಿರೋಧಕರಲ್ಲಿತ್ತು. ಇದನ್ನು ಕೇಳಿ ಡಾಕ್ಟರರು ಬೆಚ್ಚಲಿಲ್ಲ. ಬೆದರಲಿಲ್ಲ. ಬಂದುದನ್ನು ಎದುರಿಸೋಣವೆಂದು ನಡದೇ ಬಿಟ್ಟರು. ಹಿಂದೀ ಜನರೇ ಅಂಗರಕ್ಷಕರನ್ನು ಕೊಟ್ಟು ಅವರನ್ನು ರಕ್ಷಿಸುತ್ತಿದ್ದರು. ಡಾಕ್ಟರರು ಕೋಲಂಬಿಯಾ ಸರಕಾರದ ಕಡೆಗೆ ಹೋಗಲು, ಅವರು ಇವರನ್ನು ತಮ್ಮ ಕೌನ್ಸಿಲ್ ಗೃಹದಲ್ಲಿ ಕುಳ್ಳಿರಿಸಿಕೊಂಡು ಎಲ್ಲ ಪ್ರಶ್ನಗಳ ವಿಷಯಕ್ಕೆ ಚರ್ಚೆ ಮಾಡಿದರು. ಅಂತಿಂತಹರನ್ನು ಕೌನ್ಸಿಲ್ ಗೃಹದಲ್ಲಿ ಕರೆದೊಯ್ಯುವದಿಲ್ಲವಂತೆ. ಎಲ್ಲ ಹಿಂದೀ ಜನರ ಪ್ರತಿನಿಧಿಯೆಂದೂ, ತಮ್ಮ ರಾಜ್ಯಕಾರಭಾರಕ್ಕೆ ತೊಂದರೆ ಕೊಡುವವರೆಂದೂ ಡಾಕ್ಟರರಿಗೆ ಇಷ್ಟೊಂದು ಮಹತ್ವವನ್ನು ಕೊಟ್ಟಿರಲು ಸಾಕು. ಚರ್ಚೆಯೇನೊ ಆಯಿತು. ಆದರೆ ಅದರಿಂದ ಯಾವ ನಿಶ್ಚಿತ ನಿರ್ಣಯವೂ ಆಗಲಿಲ್ಲ.

ಕಾನಡಾದ ಹಿಂದೀ ಜನರು ಹರಡೀಕರರಿಗೆ ೩೦೦೦ ಡಾಲರುಗಳ ನಿಧಿಯನ್ನು ವ್ಯಾಂಕುವರ ಪಟ್ಟಣದಲ್ಲಿ ಅರ್ಪಣ ಮಾಡಿದರು. ಈ ಹಣವನ್ನು ಡಾಕ್ಟರರು ಅಮೇರಿಕೆಯಲ್ಲಿಯ ವೆಚ್ಚಕ್ಕೆ, ಹಿಂದುಸ್ತಾನಕ್ಕೆ ಮರಳಿ ಬರುವ ಪ್ರವಾಸಕ್ಕೆ, ಉಪಯೋಗಿಸಿ ಉಳಿದುದನ್ನು 'ಟಿಳಕ ಶಿಷ್ಯವೃತ್ತಿ' ಎಂಬುದನ್ನು ಪ್ರಾರಂಭಿಸಿ ೪ ಹಿಂದೀ ವಿದ್ಯಾರ್ಥಿಗಳಿಗೆ ಕೊಡುತ್ತಿದ್ದರು. ಹಿಂದುಸ್ತಾನಕ್ಕೆ ಬಂದ ನಂತರ ಕೂಡ ಆ ವಿದ್ಯಾರ್ಥಿಗಳಿಗೆ ಇವರು ಹಣ ಕಳಿಸಿದರು.

ಇಂಗ್ಲಂಡದ ಪಾರ್ಲಿಮೆಂಟಿನಲ್ಲಿ ಕಾಮನ್ಸ್ ಹಾಗೂ ಲಾರ್ಡ್ಸ್ ಎಂಬೆರಡು ಸಭೆಗಳಿರುವಂತೆ, ಅಮೇರಿಕೆಯ ಕಾಂಗ್ರೆಸ್ಸಿನಲ್ಲಿ ಸಿನೇಟ್ ಹಾಗೂ ರಿಪ್ರೆಜೆಂಟಿಟಿವ್ಹ ಎಂದು ಎರಡು ಗೃಹಗಳಿವೆ. ಇವೆರಡೂ ಸಭೆಯ ಸಭಾಸದರಿಗೆ ಹಿಂದುಸ್ತಾನದ ವಿಷಯವಾಗಿ ತಿಳಿಸಿ ಹೇಳಲು, ಅವರನ್ನು ಯಂಗ ಇಂಡಿಯಾ ಮಾಸಿಕದ ಚಂದಾದಾರರನ್ನಾಗಿ ಮಾಡಿಕೊಳ್ಳಲು ಡಾಕ್ಟರರು ಮೇಲಿಂದ ಮೇಲೆ ವಾಸಿಂಗ್ಟನ್ನಿಗೆ ಹೋಗುತ್ತಿದ್ದರು.

'ಹೋಮರೂಲ್‌ಲೀಗ' ಅಲ್ಲದೆ 'ಇಂಡಿಯನ್ ಇನ್ಫರಮೇಶನ್ ಬ್ಯೂರೊ' (ಹಿಂದೀವಾರ್ತಾಪ್ರಸಾರಕ ಸಂಘ), ಇಂಡಿಯನ್ ಲೇಬರ ಯುನಿಯನ್ (ಹಿಂದೀ ಕಾಮಗಾರರ ಸಂಘ) ಎಂಬ ಸಂಸ್ಥೆಗಳನ್ನು ಪ್ರಾರಂಭಿಸಿದರು. ಕಾಮಗಾರರ ಸಂಘಕ್ಕೆ ಹಡಗಗಳಲ್ಲಿಯ ಕೆಲಸ



ಅಮೇರಿಕೆಯಲ್ಲಿ ಹರಡೀಕರರು

ಮಾಡುವ ಹಿಂದೀ ಕಾಮಗಾರರು ಬರುತ್ತಿದ್ದರು. ಅವರಿಗೆ ಓದು ಬರೆಯಲಿಕ್ಕೆ ಕಲಿಸುವದಲ್ಲದೆ ಎಲ್ಲ ತರದ ವಿಷಯವನ್ನು ತಿಳಿಸಿ ಹೇಳುತ್ತಿದ್ದರು.

ಮಹಾಯುದ್ಧದ ಕೊನೆಯಲ್ಲಿ ಸಿನೇಟದವರು ಫಾರೇನ್ ರಿಲೇಶನ್ ಕಮೀಟಿ (ಪರರಾಷ್ಟ್ರ ಸಂಬಂಧ ಸಂಘ ) ಯನ್ನು ಸ್ಥಾಪಿಸಿದರು. ಆ ಸಂಘದವರ ಕಡೆಗೆ ಹೋಗಿ ಡಾಕ್ಟರರು ಪರತಂತ್ರ ರಾಷ್ಟ್ರಗಳು ಪಡುತ್ತಿರುವ ಕಷ್ಟವನ್ನು ವಿವರಿಸುತ್ತಿದ್ದರು.

ಇಂಗ್ಲಂಡದ ಪಾರ್ಲಿಮೆಂಟಿನ ಮೆಂಬರರಾದ **ಕರ್ನಲ್ ವೆಜ್ವುಡ್ಡರು,** ಅಮೇರಿಕೆಗೆ ಬಂದಾಗ್ಗೆ, ಅವರಂತಹ ಪ್ರಮುಖರೆದುರು, ಹಿಂದುಸ್ತಾನದ ಕಷ್ಟಗಳನ್ನು ಹೇಳಿ ಸಹಾಯ ಕೇಳುತ್ತಿದ್ದರು.

ಅಯರ್ಲಂಡದ ಸಧ್ಯದ ಅಧ್ಯಕ್ಷರಾದ, ಅಮೇರಿಕೆಯಲ್ಲಿ ಆಗ ವಾಸಮಾಡಿದ **ಡಿ ವ್ಹಲರಾ** ಇವರ ಗೂಡ ಸಹ ಡಾಕ್ಟರರಿಗೆ ಅನೇಕ ಸಲ ಕೂಡಿ ಕೆಲಸ ಮಾಡಬೇಕಾಗುತಿತ್ತು.

ಅಮೇರಿಕೆಯಲ್ಲಿಯ ವೃತ್ತಪತ್ರಗಳ ಸಂಪಾದಕರು ಪ್ರತಿವಾರ ಕ್ಕೊಮ್ಮೆ ಕೂಡಿ, ಹಿಂದಿನ–ಮುಂದಿನ ವಾರಗಳ, ಕಾರ್ಯ-ಧೋರಣ-ವಿಷಯಗಳ ಕುರಿತು ವಿಚಾರ ಮಾಡುವ ರೂಢಿಯಿದೆ. ಇಂತಹ ಕೂಟಕ್ಕೆ ಇವರು ಹೋಗಿ ಹಿಂದುಸ್ತಾನದ ವಿಷಯಕ್ಕೆ ತೋಡಿಕೊಂಡು ಅದರ ವಿಷಯಕ್ಕೆ ಬರೆಯುವಂತೆ ಪ್ರೇರೇಪಿಸುತ್ತಿದ್ದರು.

ಕಾಮಗಾರರ ಮುಂದಾಳು ನಾ. ಮ. ಜೋಶಿಯವರು ಪ್ರತಿನಿಧಿಗಳಾಗಿ ಬ್ರಿಟಿಶ್ ಸಾಮ್ರಾಜ್ಯ ಕಾಮಗಾರರ ಸಭೆಗೆ ಬಂದಿದ್ದರು. ಅವರಿಂದಲೂ ಹಿಂದೀ ಜನೋದ್ಧಾರದಲ್ಲಿ ಬಹಳ ಸಹಾಯವಾಯಿತು.

ಡಾ. ಹರಡೀಕರರು ಅಮೇರಿಕೆಯಲ್ಲಿರುವಾಗಲೇ ಅಮೇರಿಕನ್ ಮೆಕ್ಸಿಕನ್ ಜನರ ನಡುವೆ ಯುದ್ಧವೂ ಮಹಾಯುದ್ಧವೂ ನಡೆದವು. "ಅವುಗಳಲ್ಲಿ ಗಾಯ ಹೊಂದಿದ ಜನರಿಗೆ ಶುಶ್ರೂಷೆಯನ್ನು ಮಾಡಲು ಸಿದ್ಧನಿದ್ದೇನೆ. ಅದಕ್ಕಾಗಿ ನನಗೆ ಅಸ್ಪದ ಕೊಡಬೇಕೆಂ"ದು ಬ್ರಿಟಿಶ್ ಸರಕಾರಕ್ಕೆ ಕೇಳಿದರು. ಅಪ್ಪಣೆ ದೊರೆಯಲಿಲ್ಲ.

# ಲಾಲಾಜಿಯವರಿಂದ ಕಲಿತುದು

೩-೪ ವರ್ಷ ಲಜಪತರಾಯರ ಜತೆಯಲ್ಲಿ ಕೆಲಸಮಾಡಿ ಡಾ. ಹರಡೀಕರರು ಬಗೆಬಗೆಯ ಅನುಭವವನ್ನು ವಿವಿಧ ಜ್ಞಾನವನ್ನು ಪಡೆದರು. ಆ ಅನುಭವ, ಆ ಜ್ಞಾನದ ಬಲದಿಂದಲೇ ಅವರು ಕೂಡಲೆ ಮುಂದೆ ಬಂದು ಎಲ್ಲರ ಲಕ್ಷ್ಯವನ್ನು ತಮ್ಮ ಕಡೆಗೆ ಎಳೆದುಕೊಂಡರು. ಹೆಚ್ಚಾಗಿ ಲಾಲಾಜಿಯವರ ಗುಣಗಳೇ ಡಾಕ್ಟರರಲ್ಲಿ ಇಳಿದಿವೆಯೆಂದರೆ ತಪ್ಪಿಲ್ಲ. ಲಜಪತರಾಯರು ಶಿಕ್ಷಣ ಕೊಟ್ಟುದು ಹೇಗೆ? ಡಾಕ್ಟರರು ತೆಗೆದುಕೊಂಡುದು ಹೇಗೆ?

## ೧ ಸಮಯ ಸಾಧನೆ.

೧೯೧೬ನೆ ಇಸ್ವಿಯ ನವೆಂಬರ ತಿಂಗಳಲ್ಲಿ ಡಾಕ್ಟರರು ಲಾಲಾಜಿಯವರೊಡನೆ ಕಾರ್ಯ ಮಾಡಲುಪಕ್ರಮಿಸಿದರು. ಇಂಡಿಯನ್ ಹೋಂ ರೂಲ್ ಲೀಗ್ ಸಂಸ್ಥೆಯು ಪ್ರಾರಂಭವಾಯಿತು. ೧೯೧೭ನೇ ಜನವರಿ ಮೊದಲನೆ ತಾರೀಖಿಗೆ ಯಂಗ್ ಇಂಡಿಯಾ ಮಾಸಿಕ ಪುಸ್ತಕದ ಮೊದಲನೆ ಸಂಚಿಕೆಯು ಪ್ರಸಿದ್ಧವಾಗಬೇಕೆಂದು ನಿರ್ಧಾರವಾಗಿತ್ತು. ಆದರೆ ಅದರ ಮುದ್ರಿತ ಪ್ರತಿಗಳು ಡಿಸೆಂಬರ ೧೨ನೇ ತಾರೀಖಿನ ದಿವಸವೇ ಸಿದ್ಧವಾಗಿರಬೇಕೆಂದು ಹೇಳಿ, ಅದಕ್ಕೆ ಬೇಕಾದ ವಿಷಯವನ್ನು ಕೊಟ್ಟು ಅದರ ಸರ್ವ ಹೊಣೆಗಾರಿಕೆಯನ್ನು ಡಾಕ್ಟರರ ಕಡೆಗೆ ಲಜಪತರಾಯರು ಒಪ್ಪಿಸಿ ಬಿಟ್ಟರು.

ಯಾವುದಾದರೊಂದು ಮಹತ್ವದ ವಿಷಯದ ಬಗ್ಗೆ ಚರ್ಚೆ ಮಾಡುವುದಾದರೆ ಇಲ್ಲವೆ ಅದರ ಬಗ್ಗೆ ಜನರ ಸಹಾನುಭೂತಿಯನ್ನು ದೊರಕಿಸು

ವುದಾದರೆ ಒಂದು ಊಟವನ್ನು ಏರ್ಪಡಿಸಿ ಜನರ ಕೂಟವನ್ನು ಕೂಡಿ ಸುವ ಪದ್ಧತಿಯು ಅಮೇರಿಕೆಯಲ್ಲಿದೆ. ತಮ್ಮ ತಮ್ಮ ಊಟದ ವೆಚ್ಚ ವನ್ನು ತಾವೇ ಕೊಟ್ಟು ಜನರು ಬರುತ್ತಾರೆ. ವೆಚ್ಚವು ೩೫ ರೂಪಾ- ಯಿಗಳ ವರೆಗೆ ಬರುತ್ತದೆ. ಊಟದ ಕೂಟವನ್ನೊಂದು ಮನೆಯಲ್ಲಿ ಮಾಡದೆ ಯಾವುದಾದರೊಂದು ಹೋಟೆಲಿನಲ್ಲಿ ಮಾಡಿಬಿಡುತ್ತಾರೆ. ಇದೇ ಮಾದರಿಯ ಊಟದ ಕೂಟವು ಡಿಸೆಂಬರ ೧೨ನೇ ತಾರೀಖಿನ ದಿನ ಇಡಲಾಗಿತ್ತು. ಇತ್ತ ಡಾ. ಹರಡೀಕರರು ಯಂಗ್ ಇಂಡಿಯಾದ ಪ್ರತಿ ಗಳನ್ನು ತರಲು ಮುದ್ರಣಾಲಯದಲ್ಲಿಯೆ ಕುಳಿತಿದ್ದರು. ಬಡಿಸಿ ಊಟಕ್ಕೆ ಸಿದ್ಧವಾದರೂ ಡಾಕ್ಟರರು ಬರಲಿಲ್ಲ. ಲಜಪತರಾಯರು ಮೊದಲೇ ಗಡಿ ಬಿಡಿ ಸ್ವಭಾವದವರು; ಮೇಲೆ ಶೀಘ್ರ ಕೋಪಿಗಳು.ಆದ್ದರಿಂದ "ಸರಿ ಸರಿ, ಅವನೇನು ಬರುತ್ತಾನೆ. ನನಗೆ ಮೊದಲೇ ತಿಳಿದಿತ್ತು,ಅವನಿಂದ ಈ ಕೆಲಸ ವಾಗುವದಿಲ್ಲವೆಂದು" ಎಂದು ಅಲ್ಲಿ ಕೂಡಿದವರ ಮುಂದೆ ಹರಿಹಾಯ ತೊಡಗಿದರು. ಇನ್ನು ಸ್ವಲ್ಪಹೊತ್ತು ಹಾದಿನೋಡಿ ಊಟಕ್ಕೆ ಪ್ರಾರಂಭಿ ಸಬೇಕೆಂದು ನಿಶ್ಚಯಿಸಿಕೊಂಡರು. ಇಂತಹ ಪ್ರಸಂಗದಲ್ಲಿ ಊಟವಾದ ನಂತರ ಚರ್ಚೆಯು ಪ್ರಾರಂಭವಾಗುತ್ತಿರುತ್ತದೆ. ಡಾ. ಹರಡೀಕರರೆ ಸಂಘದ ಕಾರ್ಯದರ್ಶಿಗಳಾಗಿದ್ದುದರಿಂದ ಅವರ ಅವಶ್ಯಕತೆಯಂತೂ ಅತ್ಯವಶ್ಯವಾಗಿತ್ತು. ಇತ್ತ ಹರಡೀಕರರು ಹೊತ್ತಿಗೆ ಸರಿಯಾಗಿ ಪ್ರತಿ ಗಳು ಸಿದ್ಧವಾಗದ್ದರಿಂದ ನಿಯಮಿತ ವೇಳೆಗೆ ಪ್ರತಿಗಳು ಮುಟ್ಟುವದಿ ಲ್ಲೆಂದು ಮನದಲ್ಲಿಯೆ ಮಿಡುಕಹತ್ತಿದರು. ಗಂಟೆಗೆ ಸರಿಯಾಗಿ ಕೆಲಸ ಮಾಡುವ ಪರದೇಶದ ಜನರೆದುರು ತಮ್ಮ ಆಲಸ್ಯ-ಅವ್ಯವಸ್ಥೆಗಳು ಮೈದೋರಿ ಕಾರ್ಯವು ಕೆಡುವ ಹೊತ್ತು ಬಂತೆಂದು ಬಗೆ ಬಗೆಯಾಗಿ ನುಗ್ಗಾಗತೊಡಗಿದರು. ಊಟಕ್ಕೆ ಕೂಡುವ ಹೊತ್ತಿಗೆ ಕೆಲವು ಪ್ರತಿ ಗಳು ಸಿದ್ಧವಾಗಲು ಡಾಕ್ಟರರು ಅವನ್ನು ತಕ್ಕೊಂಡು ಓಡುತ್ತ ಬಂದು ಹಂಚುತ್ತಲೇ ಒಳಹೊಕ್ಕರು. ಸಿಡಿಸಿಡಿಯಾದ ಲಾಲಾಜಿಯವರು ತೇಕುತ್ತ ಹಂಚುತ್ತಿರುವ ಹುಡುಗನನ್ನು ಕಂಡು ಆನಂದ ತುಂದಿಲರಾಗಿ "ಭಲೆ ಭಲೆ, ಹಿಡಿದುದನ್ನು ಹೊತ್ತಿಗೆ ಸರಿಯಾಗಿ ದಕ್ಷತೆಯಿಂದ ಮಾಡು ವದು ನಿನ್ನಲ್ಲಿದೆ" ಎಂದು ಉದ್ಗಾರ ತೆಗೆದರು.

## ೨ ಲೇಖನ ವ್ಯವಸಾಯ.

ಯಂಗ್ ಇಂಡಿಯಾ ಮಾಸಿಕದ ಮೊದಲನೆ ಸಂಚಿಕೆಗೆ ಒಂದು ಬರೆಹವನ್ನು ಬರೆಯೆಂದು ವಿಷಯವನ್ನು ಕೊಟ್ಟು ಲಾಲಾಜಿಯವರು ಹರಡೀಕರರಿಗೆ ಅಪ್ಪಣೆಮಾಡಿದರು. ಇನ್ನೂ ಲೇಖನ ಕಲೆಯಲ್ಲಿ ನುರಿಯದ ಡಾಕ್ಟರರಿಗೆ ಇದೊಳ್ಳೆ ಪೇಚಾಟ ಬಂತು. ಚನ್ನಾಗಿ ಬರೆದು ಲಾಲಾಜಿಯನ್ನು ತೃಪ್ತಿಪಡಿಸಬೇಕು. ಲಾಲಾಜಿಯವರೊ ಅನುಭವಿಕ ಮಾರ್ಮಿಕ ಲೇಖಕರು. ಹರಡೀಕರರೊ ಇನ್ನೂ ಹುಡುಗ ಬರೆಹಗಾರರು. ಎಂದ ಮೇಲೆ ಲಾಲಾಜಿಯವರನ್ನು ಸಮಾಧಾನಪಡಿಸುವದೆಂತು? ಬರೆಯುವದು ತಪ್ಪುವಂತಿಲ್ಲ. ಬರೆದರೆ ಚನ್ನಾಗುವದಿಲ್ಲ. ಮಾಡುವದೇನು? ಒಳ್ಳೆ ಪೀಕಲಾಟ ಬಂತು. ಹಾಗೂ ಹೀಗೂ ಮಾಡಿ ತಮಗೆ ತಿಳಿದಂತೆ ಒಂದು ಲೇಖ ಬರೆದರು. ಧೈರ್ಯಮಾಡಿ ಲಾಲಾಜಿಯವರಿಗೆ ತೋರಿಸಿದರು. ಸರಿ, ಲಾಲಾಜಿಯವರು ಅದರಿಂದ ಏನೂ ತೃಪ್ತಿಹೊಂದಲಿಲ್ಲ. ಆ ವಿಷಯಕ್ಕೆ ಸಂಬಂಧಿಸಿದ ಕೆಲವು ಪುಸ್ತಕಗಳನ್ನು ಓದ ಹೇಳಿ ಇನ್ನೊಮ್ಮೆ ಬರೆಯೆಂದು ಹೇಳಿ ಕಳಿಸಿದರು. ಪುನಃ ಬರೆಯುವದಾಯಿತು. ಮರಳಿ ತಿದ್ದುವದಾಯಿತು. ಈ ರೀತಿ ೩-೪ ಸಲವಾದ ಮೇಲೆ ಹರಡೀಕರರ ಲೇಖನವೊಂದು ಮುದ್ರಣಕ್ಕೆ ಸಿದ್ಧವಾಯಿತು. ಇದಾಗುವಷ್ಟರಲ್ಲೆಲ್ಲ ಡಾಕ್ಟರರಿಗೆ ಮನಕ್ಕೆ ಬೇಜಾರಾಗಿ ಲಾಲಾಜಿಯವರೆಂದರೆ ಮನದಲ್ಲಿಯೇ ಹಲ್ಲುಕಡಿಯುತ್ತಿದ್ದರು. ಇವರ ಎಡುಕು-ಮುಳಿಸುಗಳು ಲಾಲಾಜಿಗೆ ತಿಳಿಯದಿರಲಿಲ್ಲ. ಒಡನೆ ಹರಡೀಕರರನ್ನು ಹತ್ತಿರ ಕರೆದು ಪುತ್ರವಾತ್ಸಲ್ಯದಿಂದ ಮೈಮೇಲೆ ಕೈಯಾಡಿಸುತ್ತ, "ಮಗು ತೊಂದರೆ ಕೊಡುವೆನೆಂದು ಕೋಪಿಸಬೇಡ. ನಾನು ತೊಂದರೆ ಕೊಡುವುದೆಲ್ಲ ನಿನ್ನ ಹಿತಕಾಗಿಯೆ. ತಾಯಿನಾಡಿಗೆ ಮರಳಿದನಂತರ ಉಚ್ಚತರಗತಿಯ ಮಾತೃಭಕ್ತನು ನೀನಾಗಬೇಕು. ತರುಣರು ಏಳಬೇಕು. ದಾಸ್ಯವ ಹೂಳಬೇಕು. ಸ್ವಾತಂತ್ರ್ಯವ ಗಳಿಸಬೇಕು. ಇದನ್ನೆಲ್ಲ ನೀ ಮಾಡಬೇಕೆಂದು ನನ್ನ ಮನೀಷೆ. ಇಂದು ನನ್ನ ಶಿಕ್ಷಣವು ನಿನಗೆ ತೊಂದರೆಯೆನಿಸಿದರೂ ಮುಂದಿನ

ದಿನಗಳಲ್ಲಿ ಆದರ ಬೆಲೆಯರಿತು ಆನಂದ ಹೊಂದುವಿ. ಆಗ ನನ್ನ ನೆನಪು ನಿನಗಾದೀತು. '' ಎಂದು ಸದಮಲಾಂತಃಕರುಣದಿಂದ ಮನಬಿಚ್ಚಿ ಮಾತ ನಾಡುತ್ತಿದ್ದರು. ಕೂಡಲೆ ಹರಡೀಕರರ ಮುಳಿಸೆಲ್ಲ ಮಾಯವಾಗಿ ಶಾಂತಿಯು ಮೈದೋರಿ ಮನವು ಉಲ್ಲಸಿತವಾಗುತ್ತಿತ್ತು. ಆಗಿನ ಶಿಕ್ಷಣವ ಈಗ ನೆನೆದು ಲಾಲಾಜಿಯ ಮಾತಿನ ಸತ್ಯತೆಯ ಕಂಡು ರಾಷ್ಟ್ರ ಸೈನ್ಯವನು ನಿರ್ಮಾಣಮಾಡಿದ ಸೇನಾಪತಿಗೆ ಮೈನವಿರೇಳುತಿದೆ ಈಗ.

## ೩ ಭಾಷಣ ಸಿದ್ಧತೆ.

ಅತ್ಯಂತ ಪ್ರಾಚೀನಕಾಲದಿಂದ ಇಂದಿನ ವರೆಗಿನ ಹಿಂದುಸ್ಥಾನದ ಇತಿಹಾಸದ ಜ್ಞಾನವು ಲಾಲಾಜಿಯವರಲ್ಲಿ ಅಗಾಧವಾಗಿತ್ತು. ಹಿಂದುಸ್ಥಾನಕ್ಕಾಗಿ ದೇಹ ಸವೆಸಬೇಕೆಂಬ ಪ್ರತಿಯೊಬ್ಬನಲ್ಲಿ ಈ ಜ್ಞಾನವು ಅವಶ್ಯವಾಗಿರಬೇಕೆಂದು ಅವರೆನ್ನುತ್ತಿದ್ದರು. ತಾವು ಓದುವ ಪುಸ್ತಕಗಳಲ್ಲಿ ಹಿಂದುಸ್ಥಾನದ ವಿಷಯವಾಗಿ ಬಂದ ಎಲ್ಲ ಮಹತ್ವದ ಭಾಗಗಳನ್ನು ಗೊತ್ತುಮಾಡಿಡುತ್ತಿದ್ದರು. ಅಲ್ಲದೆ ಅವುಗಳನ್ನು ಮೇಲಿಂದ ಮೇಲೆ ಓದಿ ಧ್ಯಾನದಲ್ಲಿಡಬೇಕು. ಆದಷ್ಟು ಮುಖಪಾಠ ಮಾಡಬೇಕೆಂದು ಒತ್ತಾಯ ಪಡಿಸುತ್ತಿದ್ದರು. ಈ ತೆರದ ಲೇಖನ-ವಾಚನಕಾರ್ಯದಲ್ಲಿ ನಾಮದಾರ ಗೋಪಾಳ ಕೃಷ್ಣ ಗೋಖಲೆಯವರು ಪ್ರಖ್ಯಾತರಾಗಿದ್ದರು. ಅವರ ಹೆಸರನ್ನು ತೆಗೆದುಕೊಂಡೇ ಈ ಕಾರ್ಯವನ್ನು ಮಾಡುವಂತಿದೆಯೆಂದು ಲಾಲಾಜಿಯವರೆನ್ನುತ್ತಿದ್ದರು. ಎಲ್ಲಿಯಾದರೂ ಪ್ರಚಾರ ಕಾರ್ಯಕ್ಕೆ ಹೊರಡುವದಾದರೆ ಆಯಾ ವಿಷಯ ಸಂಬಂಧವಾದ ಸಂಗತಿಗಳನ್ನು ಕೂಡಿಸಿಕೊಳ್ಳದ ಹೊರತು ಹೊರಡಗೊಡುತ್ತಿದ್ದೇ ಇಲ್ಲ. ತಾವೂ ಸಹ ಕಷ್ಟಪಟ್ಟು ಆ ತೆರದ ಸಿದ್ಧತೆ ಮಾಡಿಕೊಡುತ್ತಿದ್ದರು. ಇವತ್ತಿಗೆ " ವ್ಯಾಖ್ಯಾನ ಕಾರ್ಯದಲ್ಲಿ ನನ್ನಲ್ಲಿ ಏನಾದರೂ ಪ್ರಗತಿಯಾಗಿದ್ದರೆ ಅದೆಲ್ಲವೂ ಲಾಲಾಜಿಯವರ ಶಿಕ್ಷಣದ ಫಲವೇ ಆಗಿದೆ" ಎಂದು ಡಾಕ್ಟರರು ಮೇಲಿಂದ ಮೇಲೆ ಹೇಳುತ್ತಾರೆ.

## ೪ ಅಚ್ಚುಕಟ್ಟುತನ

ಅಚ್ಚುಕಟ್ಟುತನವೆಂದರೆ ಲಾಲಾಜಿಗೆ ಬಲು ಪ್ರೀತಿ. ಅವ್ಯವಸ್ಥೆ ಎಂದರೆ ಅವರಿಗೆ ಇಲ್ಲದ ಸಿಟ್ಟು ಬರುತ್ತಿತ್ತು. ಮನೆಯೊಳಗೆ ಹೊರಗೆ, ನುಡಿಯಲ್ಲಿ ನಡೆಯಲ್ಲಿ, ಬರೆಹದಲ್ಲಿ ಭಾಷಣದಲ್ಲಿ, ಪ್ರಚಾರದ ಯಾವುದೊಂದು ಕಾರ್ಯದಲ್ಲಿ, ಅವರಿಗೆ ಅಚ್ಚುಕಟ್ಟುತನವೆಂದರೆ ಬಲುಮೆಚ್ಚಿಗೆ. ಆಡಂಬರಕ್ಕಾಗಿ ಜನರೆದುರೊಂದೇ ಶಿಸ್ತಿನಿಂದಿರುವದು ಅವರಿಗೆ ಸೇರುತ್ತಿರಲಿಲ್ಲ. ಹೊರಗಿನಂತೆ ಒಳಗೆ ಎಲ್ಲವೂ ಸರಿಯಾಗಿದ್ದುದರ ಕಡೆಗೆ ಅವರ ಲಕ್ಷ್ಯವಿರುತ್ತಿತ್ತು. ಒಟ್ಟಿನಲ್ಲಿ ಅಚ್ಚುಕಟ್ಟುತನವು ಅವರ ಸ್ವಭಾವವಾಗಿ ಬಿಟ್ಟಿತ್ತು.

ಮನೆಯಲ್ಲಿ ಯಾವುದೇ ಭಾಗದಲ್ಲಿ ಸ್ವಲ್ಪ ಕಸವಿದ್ದರೆ ಸಾಕು, ಜಡೆಯುಪ್ಪಳಿಸುತ್ತಿದ್ದರು. ಪುಸ್ತಕ ಕಾಗದ ಪತ್ರಗಳೆಲ್ಲ ಓರಣದಿಂದ, ಅರಿವೆ-ಅಂಚಡಿ-ಅಡಿಗೆ ಪಾತ್ರೆಗಳೆಲ್ಲ ಸ್ವಚ್ಛವಾಗಿ ಇರಬೇಕಲ್ಲದೆ ಅವು ಇರತಕ್ಕ ಸ್ಥಳದಲ್ಲಿಯೇ ಇರಬೇಕೆಂಬುದನ್ನು ಜಾಗರೂಕತೆಯಿಂದ ನೋಡುತ್ತಿದ್ದರು.

ಒಂದು ಸಾರೆ ಮಧ್ಯಾಹ್ನದ ಸಮಯ. ಊಟದ ಹೊತ್ತಾಗಿದೆ. ಹರಡೀಕರರಿಗೆ ಹಸಿವೆಯಾಗಿ ಬಗೆಯಲ್ಲಿ ಊಟದ ವಿಚಾರವೇ ಸುತ್ತಾಡುತಿದೆ. ಲಾಲಾಜಿಯು ಇನ್ನೂ ಊಟಕ್ಕೆದ್ದಿರಲಿಲ್ಲ. ಅಷ್ಟರಲ್ಲಿ ಇದ್ದ ಸ್ಥಳದಿಂದ ಒಂದು ಪುಸ್ತಕವು ಮಾಯವಾದುದು ಅವರ ಕಣ್ಣಿಗೆ ಬಿತ್ತು. ಸರಿ, ಲಾಲಾಜಿಗೆ ಕಡುಕೋಪ ಬಂತು, "ನಡೆ ಮೂರ್ಖಾ, ಎಷ್ಟು ಹೇಳಿದರೂ ನಿನಗೆ ಅಷ್ಟೇ ಇದೆ. ಕೊನೆಗೂ ತಪ್ಪಲಿಲ್ಲ ನಿನ್ನ ಎಚ್ಚರಗೇಡಿತನ. ಎಲ್ಲಿದೆ ಆ ಪುಸ್ತಕ? ಹುಡುಕಿಕೊಂಡು ಬಾ ಈಗಿಂದೀಗಲೆ" ಎಂದು ಗದ್ದರಿಸಿದರು. ಹಸಿವೆಯಿಂದ ಬಳಲುತಿದ್ದ ಡಾಕ್ಟರರಿಗೆ ತಮ್ಮ ಅಜಾಗರೂಕತೆಯ ವಿಷಯಕ್ಕೆ ಕೆಡಕೆನಿಸಿ ಪುಸ್ತಕ ಹುಡುಕಬೇಕೆನಿಸಿತೇನೋ ನಿಜ, ಆದರೆ ಹಸಿವೆ ತಡೆವುದು ಸಾಧ್ಯವಿರಲಿಲ್ಲ. ಆದ್ದರಿಂದ ಭಯಭಕ್ತಿಯಿಂದ "ಲಾಲಾಜಿ, ನಾನಿನ್ನೂ ಚಿಕ್ಕವ, ಪೋರ, ಅನನುಭವಿಕ. ಮರೆವಾಗುವದು ಸಹಜ. ಹಸಿವೆ

ಯಾಗಿದೆ; ಊಟಮಾಡಿ ಹುಡುಕಿಕೊಡುವೆ. ಊಟಕ್ಕೇಳಬೇಕು. ಮನಸ್ಸಿಗೆ ತೊಂದರೆ ಪಟ್ಟುಕೊಳ್ಳದೆ ಹುಡುಗನ ತಪ್ಪನ್ನು ಕ್ಷಮಿಸಬೇಕೆಂ''ದು ಕೈ ಜೋಡಿಸಿದರು. ಲಾಲಾಜಿಯವರು ಇವರ ವಿನಯಕ್ಕೆ ಮೆಚ್ಚಿ ವಿನೋದ ದಿಂದ "ಆಹಾ ಬಲ್ಲೆ, ನಿನ್ನನ್ನು ಚನ್ನಾಗಿ ಬಲ್ಲೆ. ನೀನು ಪಕ್ಕಾ ಮಹಾರಾಷ್ಟ್ರೀಯನಿರುವಿ. ಇನ್ನೊಮ್ಮೆ ಹೀಗೆ ಮಾಡಬೇಡ, ನಡೆ ಈಗ ಹೋಗೋಣ ಊಟಕ್ಕೆ ''ಎಂದು ಹೊರಟರು.

## ೫ ಮುಂದರಿವ ದಿಟ್ಟತನ

ಒಮ್ಮೆ ಅಮೇರಿಕೆಯ ಸಿನೇಟದವರು ಚಿಕ್ಕಪುಟ್ಟ ಹಾಗೂ ಪರ ದಾಸ್ಯದಲ್ಲಿ ಕೊಳೆಯುತ್ತಿರುವ ರಾಷ್ಟ್ರಗಳಿಗೆ ಸ್ವಯಂ ನಿರ್ಣಯ ಹಕ್ಕು ಇರಬಹುದೋ ಇರಬಾರದೋ ಎಂಬ ವಿಷಯವನ್ನು ನಿರ್ಣಯಿಸುವ ದಕ್ಕೆ ಪರರಾಷ್ಟ್ರಗಳ ಸಂಬಂಧ ಕಮೀಟಿಯನ್ನು ಸ್ಥಾಪಿಸಿದರು. ಹಿಂದುಸ್ಥಾನಕ್ಕೆ ಇದ್ದ ಕೊರತೆಗಳನ್ನು ಆ ಕಮೀಟಿಯ ಮುಂದಿಡ ಬೇಕೆಂದು ಡಾಕ್ಟರರು ಅವರ ಸಹೋದ್ಯೋಗಿಗಳು ಲಾಲಾಜಿಯವರಿಗೆ ಹೇಳಿದರು. ಇದರಿಂದ ಏನಾದರೂ ಪ್ರಯೋಜನವಾದೀತೆಂದು ಲಾಲಾಜಿ ಯವರಿಗೆ ಎನಿಸಿರಲಿಲ್ಲವಾದ್ದರಿಂದ ಅತ್ತಕಡೆಗೆ ಅವರು ಲಕ್ಷ್ಯವನ್ನೇ ಕೊಡ ಲಿಲ್ಲ. ಆದರೆ ಉಳಿದವರು ಈ ಕಾರ್ಯವು ಆಗಿಯೇತೀರಬೇಕೆಂದೆನ್ನು ತ್ತಿದ್ದುದರಿಂದ ಡಾಕ್ಟರರು ವಾಷಿಂಗ್ಟನ್ನದಲ್ಲಿಯ ತಮ್ಮ ಗೊತ್ತಿನ ಸಿನೇಟ್ ಸಭಾಸದರಿಗೆ, ಸಿನೇಟದ ಮುಂದೆ ಹಿಂದುಸ್ತಾನದ ದುಃಖವನ್ನು ಹೇಳಬೇಕಾಗಿದೆ, ಅದಕ್ಕೆ ಅಪ್ಪಣೆಯನ್ನು ದೊರಕಿಸಿ ತಿಳುಹಿಸಬೇಕೆಂದು ಬರೆದರು. ಅವರು ಸಿನೇಟದವರನ್ನು ಕೇಳಿ "ಅಪ್ಪಣೆ ಸಿಕ್ಕಿದೆ; ನಾಳೆದು ಬಂದು ಹೇಳಬೇಕು." ಎಂದು ಟೆಲಿಫೋನಿನಿಂದ ತಿಳಿಸಿದರು. ಕಚೇರಿ ಯಲ್ಲಿ ಡಾಕ್ಟರರು ಇದ್ದಿಲ್ಲ. ಲಾಲಾಜಿಯವರೇ ಫೋನಿನ ಉತ್ತರವನ್ನು ಸ್ವೀಕರಿಸಿದರು, ಉತ್ತರವನ್ನು ಕೇಳಿ ಚಕಿತರಾದರು. ಅವರಿಗೆ ಒಳ್ಳೇ ಸಿಟ್ಟು ಬಂತು. ಇದೆಲ್ಲವೂ ಹರಡೀಕರನ ಅಧಿಕ ಪ್ರಸಂಗವಾಗಿದೆಎಂದು ಗೊಣಗುಟ್ಟಿದರು.

ಆದರೆ ಮಾಡುತ್ತಾರೇನು ? ಇಷ್ಟೆಲ್ಲ ವ್ಯವಸ್ಥೆಯಾದ ಬಳಿಕ ಬಿಡುವದೆಂತು ? ಇರುಳೆಲ್ಲ ಆ ವಿಷಯವಾಗಿ ಬೇಕಾಗಿದ್ದ ಸಂಗತಿಗಳನ್ನೆಲ್ಲ ಕೂಡಿಸಿ ೨೪ ಪುಟದ ಒಂದು ಚಿಕ್ಕ ಪುಸ್ತಕವನ್ನು ಮುದ್ರಿಸಿಕೊಂಡು ತಾವು ಡಾ. ಹರಡೀಕರರು ತಮ್ಮ ಅಮೇರಿಕೆಯ ವಕೀಲ ಮಿ. ಡಡ್ಲೆಫಿಲ್ಡ್ ಮೆಲೋನ್ ಇವರೊಡನೆ ಮರುದಿವಸವೇ ವಾಷಿಂಗ್ಟನ್ನಕ್ಕೆ ಹೊರಟರು. ಅವಿಶ್ರಾಂತ ಶ್ರಮಪಡದಿದ್ದರೆ ಆ ಕಾರ್ಯವು ಸಾಧಿಸುವದಿಲ್ಲೆಂದೆನಿಸಿದ್ದರಿಂದ, ಲಾಲಾಜಿಯವರಿಗೆ ವಿಶ್ರಾಂತಿ ಸಿಗದಷ್ಟು ದಕ್ಷತೆಯಿಂದ ಡಾಕ್ಟರರು ಕೆಲಸದಲ್ಲಿ ತೊಡಗಿದ್ದರು. ಮೊದಲೆ ಇವರೆಲ್ಲರ ಮೇಲೆ ರೇಗಿದ ಲಾಲಾಜಿಯವರು “ ನೀನು ನನ್ನನ್ನು ಕೊಲ್ಲಬೇಕೆಂದು ಮಾಡಿರುವಿಯೆಂ”ದು ಡಾಕ್ಟರರಿಗೆಂದರು. “ ಏನಾದರೂ ಈ ಕಾರ್ಯವನ್ನು ಮುಗಿಸಿಯೇ ತೀರಬೇಕು. ಇದರಿಂದ ನಮ್ಮ ಕಾರ್ಯಕ್ಕೆ ಬಲಬರುತ್ತದೆ. ತಮ್ಮ ಇತರ ಎಲ್ಲ ಕೆಲಸಗಳನ್ನು ನಾನು ಮಾಡುತ್ತೇನೆ. ಸಿನೇಟದ ಕಾರ್ಯವನ್ನಷ್ಟು ನೀವು ಮಾಡಿದರಾಯಿತು. ಈ ದಿವಸ ವಿಶ್ರಾಂತಿಗಾಗಿ ಬೇಕಾದರೆ ಒಂದು ನಾಟಕಕ್ಕೆ ಹೋಗೋಣ’ ಎಂದು ಡಾಕ್ಟರರು ಅವರನ್ನು ಸಮಾಧಾನ ಮಾಡಲು ಯತ್ನಿಸುತ್ತಿದ್ದರು. ಹೀಗಾಗಿ ಅಂತೂ ಒಮ್ಮೆ ಆ ಕಾರ್ಯವನ್ನು ಮುಗಿಸಿ ಎಲ್ಲರೂ ನ್ಯೂಯಾರ್ಕ್ ಪಟ್ಟಣಕ್ಕೆ ತಿರುಗಿ ಬಂದರು.

ಮತ್ತೊಮ್ಮೆ ಸಿನೇಟದ ಓರ್ವ ಸಭಾಸದನು “ ನಾಳಿನ ನನ್ನ ಭಾಷಣದಲ್ಲಿ ಹಿಂದುಸ್ಥಾನದ ವಿಷಯವಾಗಿ ಕೆಲವು ಸಂಗತಿಗಳನ್ನು ಹೇಳಬೇಕೆಂದು ಮಾಡಿರುವೆನಾದ್ದರಿಂದ, ಇಂತಿಂತಹ ಮಾತುಗಳನ್ನೊಳಗೊಂಡ ಭಾಷಣವನ್ನು ಬರೆದು ಕೊಡುವಿರಾ ? ” ಎಂದು ಡಾಕ್ಟರರಿಗೆ ಕೇಳಿದನು. ಅದನ್ನೂ ಲಾಲಾಜಿಯವರ ಕಡೆಗೆ ಒಪ್ಪಿಸಲು ಇವರು ಯತ್ನಿಸಿದರು. ಇಷ್ಟರಲ್ಲಿ ಸಿನೇಟದ ಮುಂದೆ ಚರ್ಚೆಯಾಗುವದರಿಂದಾಗುವ ಲಾಭವನ್ನು ಮನಗಂಡ ಲಾಲಾಜಿಯವರು ಮನಃಪೂರ್ವಕವಾಗಿ ಆ ಭಾಷಣಪನ್ನು ಸಿದ್ಧಮಾಡಿ ಕೊಟ್ಟರು.

ಮುಂದೆ ಡಾಕ್ಟರರ ಕಾರ್ಯದ ಅಚ್ಚುಕಟ್ಟುತನ, ಮುಂದರಿವ ದಿಟ್ಟತನ, ಜನರನೊಲಿಸುವ ಜಾಣತನ, ಸಮಯಕ್ಕೆ ಸರಿಯಾಗಿರುವ

ಬುದ್ಧಿಯ ಚುರುಕುತನ, ದುಡಿತಕ್ಕೆ ಬೇಕಾದ ಕಷ್ಟಗಳನ್ನೆಲ್ಲ ಕಂಡು, ಕಾಯದೆ ಕೌನ್ಸಿಲುಗಳಲ್ಲಿ ಹೋಗಿ,ಅಲ್ಲಿಯ ಜನರ ಮನವೊಲಿಸಿ, ಅವರೊಡನೆ ಚರ್ಚಿಸಿ, ತಮ್ಮ ಕಾರ್ಯದ ಬಗ್ಗೆ ಸಹಾನುಭೂತಿಯನ್ನು ದೊರಕಿಸಿ, ಕೆಲಸ ಮಾಡುವದು ಅವಶ್ಯಕವೆಂದು ಲಾಲಾಜಿಯವರು ಮೇಲಿಂದ ಮೇಲೆ ಹರಡೀಕರರನ್ನು **ಸಿನೇಟದ** ಅಧಿವೇಶನಗಳಿಗೆ ಕಳಿಸತೊಡಗಿದರು.

## ೬ ಉತ್ಕಟ ದೇಶಪ್ರೇಮ

ಒಂದು ದಿನ ಲಾಲಾಜಿ, ಡಾಕ್ಟರ ಹರಡೀಕರರು, ಡಾ. ಶಾಸ್ತ್ರಿ ಮೂವರು ಕೂಡಿ ಒಂದು ಚಿಕ್ಕ ಉಗಿಡೋಣಿಯಲ್ಲಿ ಕುಳಿತು, ೨೦–೨೨ ಮೈಲಿ ದೂರದಲ್ಲಿರುವ ಹಳ್ಳಿಗೆ ಹೊರಟಿದ್ದರು. ಡೋಣಿಯು ಹೊರಡುವ ಪೂರ್ವದಲ್ಲಿ ಇಂಗ್ಲೆಂಡಿನ ಟಪಾಲು ಅವರ ಕೈಸೇರಿತ್ತು. ಒಂದು ವರ್ತಮಾನ ಪತ್ರದಲ್ಲಿ ಮಾಂಟೆಗ್ಯು ಸಾಹೇಬರು ಹಿಂದುಸ್ಥಾನದ ಸ್ವಯಂ ನಿರ್ಣಯದ ವಿಷಯವಾಗಿ ಆಡಿದ ಮಾತುಗಳು ಪ್ರಸಿದ್ಧವಾಗಿದ್ದವು. ಅದನ್ನು ಕೇಳುತ್ತಲೇ ಲಾಲಾಜಿಯವರು ಆ ಸಂಬಂಧವಾಗಿ ಒಂದು ಲೇಖವನ್ನು ಡೋಣಿಯಲ್ಲಿಯೇ ಬರೆದುಕೊಳ್ಳಲು ಹೇಳಲು ಪ್ರಾರಂಭಿಸಿದರು. ಆ ವಿಚಾರದಲ್ಲಿ ತಾವು ಡೋಣಿಯಲ್ಲಿ ಹೊರಟಿದ್ದೇವೆ; ಸುತ್ತುಮುತ್ತಲು ನೋಡಬೇಕಾದ ಸುಂದರ ನೋಟವಿದೆ; ನೋಡಬೇಕು, ನೋಡಿ ನಲಿಯಬೇಕು, ನಲಿದು ಕೆಲೆಯಬೇಕೆಂಬುದನ್ನು ಮರೆತು ಬಿಟ್ಟರು.

ಮಾತೃಭೂಮಿ ಎಂದರೆ ಮೈ ಉಬ್ಬುತ್ತಿದ್ದ ಲಾಲಾಜಿಗೆ ಹಗೆಗಳ ಹೀನ ಬರೆಹವು ತಡೆಯದಾಯಿತು. ಭರತ ಭೂಮಿ, ಅದಕ್ಕಾಗಿ ಪರನಾಡಿಗರ ದ್ವೇಷ, ಇವೇ ಚಿತ್ರಗಳು ಅವರ ಕಣ್ಣುಮುಂದೆ ಕಾಣಲಾರಂಭಿಸಿದವು. ಇತ್ತ ಉಳಿದವರಿಗೆಲ್ಲ ಆ ಪ್ರವಾಸದ ಆನಂದವನ್ನು ಸವಿಯಬೇಕೆಂದು ಬಲವಾದ ಇಚ್ಛೆಯಿದ್ದಿತು. ಆದರೆ ಮಾಡುತ್ತಾರೇನು? ಲಾಲಾಜಿಯನ್ನು ಕಂಡು, ಅವರ ದೇಶಾಭಿಮಾನಕ್ಕೆ ಅಚ್ಚರಿಗೊಂಡು, ಅವರ ಮಾತೃಭೂಮಿಯ ಪ್ರೇಮಕ್ಕೆ, ಭಾರತದ ಏಳಿಗೆಯ ಕಳವಳಕ್ಕೆ,

ನವೋನವೋ ಎಂದು ತಮ್ಮ ಇಚ್ಛೆಯನ್ನು ಬದಿಗಿಟ್ಟು, ಲಾಲಾಜಿಯ ವರು ಹೇಳುತ್ತಿರುವುದನ್ನು ಕೇಳತೊಡಗಿದರು; ಡಾಕ್ಟರರು ಬರೆಯ ತೊಡಗಿದರು. ಹಳ್ಳಿಗೆ ಬರುವಷ್ಟರಲ್ಲಿ ಆ ಲೇಖವು ಮುಗಿದಿದ್ದಿತು. ಆ ಕೂಡಲೆ ಅದನ್ನು ವೃತ್ತ ಪತ್ರಕ್ಕೆ ಕಳುಹಿಸಿದರು. ಹೀಗೆ ಲಾಲಾಜಿಯ ವರ ಹಿಂದುಸ್ಥಾನ ವಿಷಯಕವಾದ ಪ್ರೇಮವು ಅಪಾರವಾಗಿದ್ದಿತು. ಹಿಂದುಸ್ಥಾನದ ಹಿತಗೈಯುವಂತಹ ಕಾರ್ಯವೆಂದರೆ ಅವರಿಗೆ ಹೊಟ್ಟೆ ಹಿಡಿಯದಷ್ಟು ಆನಂದವಾಗುತ್ತಿತ್ತು. ಅದರ ಅಹಿತವನ್ನು ಯಾರಾದರು ಮಾಡಲು ಹೊರಟರೆ ಅವರು ಸಿಡಿಸಿಡಿಯಾಗಿ, ವಿರೋಧಕರ ಪರಾಮರಿಕೆ ಯನ್ನು ಚನ್ನಾಗಿ ತೆಗೆದುಕೊಳ್ಳುವ ಕಾರ್ಯದಲ್ಲಿ, ಹಸಿವೆ-ನೀರಡಿಕೆ ಸುಖ-ದುಃಖಗಳನ್ನು ಮರೆತುಬಿಡುತ್ತಿದ್ದರು. ಈ ಮಾತೃಭೂಮಿಯ ಉತ್ಕಟ ಪ್ರೇಮದ ಬೀಜವೇ ಡಾಕ್ಟರರಲ್ಲಿ ಹೆಮ್ಮರವಾಗಿ ಬೆಳೆದಿದೆ.

## ೭ ಮುಂದಾಳುವಿನ ಅಂತಃಕರಣ

ಲಾಲಾಜಿಯವರು ಬೇಗನೆ ಸಿಟ್ಟಿಗೇಳುತ್ತಿದ್ದುದೇನೋ ನಿಜ. ಆದರೆ ಕೂಡಲೆ ಶಾಂತರಾಗುತ್ತಿದ್ದರು. ತಮ್ಮ ವೈರಿಗಳ ವಿಷಯದಲ್ಲಿ ಕೂಡ ಹೆಚ್ಚಾಗಿ ಹಗೆತನವು ಬಗೆಯಲುಳಿಯುತಿರಲಿಲ್ಲ; ಸೇಡು ಮನದಲ್ಲಿ ಮೂಡುತಿರಲಿಲ್ಲ. ಈ ತೆರದ ನಿರ್ಮಲ ನಿರ್ದುಷ್ಟ ನಡತೆಗಾಗಿಯೇ ಸ್ವದೇಶ-ಪರದೇಶಗಳಲ್ಲಿ ಅವರಿಗೆ ಅನೇಕ ಗೆಳೆಯರಿದ್ದರು. ತಮ್ಮ ಸಂಗ ಡಿಗ ಕೆಲಸಗಾರರು ಅವರಿಗೆ ಅಣ್ಣತಮ್ಮಂದಿರಾಗಿ ಕಾಣುತಿದ್ದರು.ಹರಡೀಕ ರರಂತೂ ಹತ್ತಿರವೇ ಇರುತ್ತಿದ್ದುದರಿಂದ ಲಾಲಾಜಿಗೆ ಮಗನಾಗಿ ಬಿಟ್ಟಿ ದ್ದರು. ಡಾಕ್ಟರರ ತಿಂಡಿ-ತಿನಸು, ಊಟ-ಉಪಚಾರ, ನಿದ್ರೆ-ನೀರಡಿಕೆ, ಅಳಲಿಕೆ-ಬಳಲಿಕೆ, ದಣಿವು-ತಣಿವುಗಳ ಕಡೆಗೆ, ದುಡಿತ-ಬಿಡವುಗಳ ಕಡೆಗೆ, ಲಾಲಾಜಿಯವರು ತುಂಬಾ ಲಕ್ಷ್ಯಕೊಡುತ್ತಿದ್ದರು. ದುಡಿತ ಬೀಳುವುದೆಷ್ಟು, ವಿಶ್ರಾಂತಿ ಸಿಗುವುದೆಷ್ಟು, ನೋಡಿಕೊಂಡು ಹೆಚ್ಚು ಕೆಲಸವಿದ್ದರೆ ತಾವು ಮಾಡಿ ಡಾಕ್ಟರರಿಗೆ ವಿರಮಿಸಲು ಹೇಳುತ್ತಿದ್ದರು. ಒಮ್ಮೆ ಡಾಕ್ಟರರು ಪ್ರಚಾರ ಕಾರ್ಯಕ್ಕಾಗಿ ಪ್ರವಾಸ ಮಾಡುತ್ತಿರಲು ೭-೮ ದಿನಗಳಾದರೂ ಪತ್ರ ಬರೆಯಲಿಲ್ಲ. ಲಾಲಾಜಿಯವರಿಗೆ ಬಗೆ

ಬಗೆಯ ಕಲ್ಪನೆಗಳು ಬಂದವು ತಲೆಯಲ್ಲಿ. ಮನಕ್ಕೆ ಚಂಚಲ, ಎದೆಯಲ್ಲಿ ಕಳವಳವಾಯಿತು. ಕೂಡಲೆ ಅಲ್ಲಿಗೆ ಇಲ್ಲಿಗೆ ಎಲ್ಲೆಲ್ಲಿಯೂ ತಂತಿಯನ್ನು ಕಳಿಸಿ ಕೇಳಿದರು ತಮ್ಮ ಹುಡುಗನ ನೆಮ್ಮದಿಗೆ. ಸುಖವಾಗಿರುವನಾಗಿ ತಿಳಿದ ಮೇಲೆ ಚಿಂತೆಯನ್ನು ಬಿಟ್ಟು ಶಾಂತರಾದರು.

ಈ ರೀತಿಯಾಗಿ ಹೊತ್ತಿಗೆ ಸರಿಯಾಗಿ ಕೆಲಸ ಮಾಡುವ ಕಾರ್ಯ ದಕ್ಷತೆ, ಆಡಂಬರಕ್ಕಲ್ಲದೆ ಒಳಹೊರಗೂ ಪಾಲಿಸುವ ಅಚ್ಚುಕಟ್ಟುತನ, ಮಾತೃಭೂಮಿಯ ಉತ್ಕಟ ದೇಶಾಭಿಮಾನ, ಸಂಗಡಿಗರ ವಿಷಯವಾಗಿ ಮುಂದಾಳುವಿನಲ್ಲಿರಬೇಕಾದ ಕಳಕಳಿಯ ಜೀವನ, ಲೇಖನ–ಭಾಷಣೋತಿ ಹಾಸಗಳ ಶಿಕ್ಷಣಕೊಟ್ಟು, ಸರಕಾರದವರು ಹಿಂದುಸ್ಥಾನಕ್ಕೆ ಹೋಗು ವುದಕ್ಕಾಗಿ ತಮಗೆ ಪಾಸು ಪೋರ್ಟನ್ನು ಕೊಟ್ಟದ್ದಕ್ಕಾಗಿ, ೧೯೧೯ನೇ ಇಸ್ವಿಯ ಡಿಸೆಂಬರ ತಿಂಗಳಲ್ಲಿ ಎಲ್ಲ ಕಾರ್ಯಭಾರವನ್ನು ಡಾ. ಹರಡೀ ಕರರ ಮೇಲೆ ಹಾಕಿ, ಲಾಲಾಜಿಯವರು ಮಾತೃಭೂಮಿಗೆ ಹೊರಟರು. ಇದಕ್ಕೆ ಮುಂಚೆಯೆ ಡಾ. ಶಾಸ್ತ್ರಿಯವರು ಹಿಂದುಸ್ಥಾನಕ್ಕೆ ಹೋಗಿ ದ್ದರು. ಲಾಲಾಜಿಯವರು ಹೋದದ್ದಕ್ಕಾಗಿ ತೆರವಾದ ಅವರ ಅಧ್ಯಕ್ಷ ಸ್ಥಾನವನ್ನು ಡಾ. ಸಂಡರ್ಲಂಡ್ ಇವರು ಸ್ವೀಕರಿಸಿ ಯಂಗ್ ಇಂಡಿಯಾ ಮಾಸಿಕದ ಸಂಪಾದಕರಾದರು. ಲಾಲಾಜಿಯವರ ಉಳಿದೆಲ್ಲ ಕಾರ್ಯ ಡಾ. ಹರಡೀಕರರೆ ಮಾಡತೊಡಗಿದರು.

# ತಾಯಿನಾಡಿಗೆ ಮರಳಿ

ಅಮೇರಿಕೆಗೆ ಬಂದ ಗುರಿಯು ಯಾವುದೇ ಇದ್ದರೂ ಬಂದ ಕಾರ್ಯವು ಹೆಚ್ಚು ಯಶಸ್ವಿಯಾಯಿತೆಂದು ಹರ್ಷಿತರಾಗಿ ಡಾಕ್ಟರರು ಹೊರಟರು ಮಾತೃಭೂಮಿಗೆ. ಪರನಾಡಿನಲ್ಲಿಯೂ ಕೂಡ ತಾಯಿ ನಾಡಿನ ಸೇವೆ; ಅದರಲ್ಲಿಯೂ ನುರಿತ, ಅಸಾಮಾನ್ಯ ಬುದ್ಧಿಶಾಲಿಗಳಾದ ಲಾಲಾಜಿಯವರೊಡನೆ ಮಾಡಿದ ಸೇವೆ. ಕೇಳುವದೇನು! ಸೇವೆ ಶಿಕ್ಷಣಗಳೆರಡೂ ಒಂದೇ ಕಾಲಕ್ಕೆ ಜರುಗಿದ್ದರಿಂದ ಹರಡೀಕರರಿಗೆ ಪರಮಾನಂದವಾಯಿತು. ಬಂದುದು ಡಿಗ್ರಿ ಶಿಕ್ಷಣಕ್ಕಾಗಿ; ಪಡೆದುದು ಮಾತೃಭೂಮಿಯ ಸೇವೆಯ ಶಿಕ್ಷಣ. ಅಚ್ಚುಕಟ್ಟುತನ, ಕಷ್ಟ ಸಹಿಷ್ಣುತೆ, ಸಹನಶೀಲತೆ, ಕಾರ್ಯದಕ್ಷತೆಗಳನ್ನು ಮೈಗೂಡಿಸಿಕೊಂಡು, ಲೇಖನ ವ್ಯಾಖ್ಯಾನ ಕಲೆಗಳಲ್ಲಿ ಸಾಧಿಸಿದಷ್ಟು ಕೋವಿದನಾಗಿ ನಾಡಸೇವೆಗೈಯ್ಯಲು ಇಮ್ಮಡಿ ಹುರುಪಿನಿಂದ ಹೊರಟರು. ಇಷ್ಟು ಹಣ ವೆಚ್ಚಮಾಡಿ, ಹೊಟ್ಟೆತುಂಬಿಕೊಳ್ಳುವ ಡಿಗ್ರಿ ಪಡೆದು ಬರಲಿಲ್ಲೆಂದು ಅಸಮಾಧಾನಿಗಳಾಗಿರಲಿಲ್ಲ. ತನುಮನಧನಗಳಿಂದ ದೇಶ ಸೇವೆ ಮಾಡುವದೇ ತಮ್ಮ ಜೀವನದ ಗುರಿಯೆಂದು ಉತ್ಸಾಹದಿಂದಿದ್ದರು.

೧೯೧೬ರಿಂದ ೧೯೨೦ರ ವರೆಗೆ ಹಿಂದೂ ದೇಶದ ವಿಷಯವಾಗಿ ನಿಜವಾದ ಜ್ಞಾನವನ್ನು ಅಮೇರಿಕೆಯ ಜನರಿಗೆ ಕೊಡಲು ಅವ್ಯಾಹತವಾಗಿ ದುಡಿದು ಅಮೇರಿಕೆಯನ್ನು ಬಿಟ್ಟರು. ಮಾರ್ಗದಲ್ಲಿ ಇಂಗ್ಲಂಡ್, ಸ್ಕಾಟ್‌ಲಂಡ್‌ಗಳಲ್ಲಿಳಿದು ಕೆಲವು ಹಳ್ಳಿ-ಪಟ್ಟಣಗಳನ್ನು ಸಂದರ್ಶಿಸಿ

ಹಿಂದುಸ್ಥಾನದ ವಿಷಯವಾಗಿ ಭಾಷಣಗಳನ್ನು ಮಾಡಿದರು. ಮುಂಬ-ಯಿಯ ಡಾ. ಸಿ. ಆರ್. ಆಠವಲೆ ಎಂಬುವರು ಈ ಕಾರ್ಯದಲ್ಲಿ ಡಾಕ್ಟರರಿಗೆ ಕಾರ್ಯದರ್ಶಿಗಳಾಗಿ ನೆರವಾದರು.

ಇಂಗ್ಲೆಂಡದಿಂದ ಬೆಲ್ಜಿಯಮ್, ಜರ್ಮನಿ, ಇಟಲಿ, ವೇನೀಸಗಳ ಮಾರ್ಗವಾಗಿ ಹಿಂದುಸ್ಥಾನಕ್ಕೆ ಹೋಗಿ ಯುದ್ಧದ ಸ್ಥಳಗಳನ್ನು ನೋಡಬೇಕೆಂದು, ಹರಡೀಕರರ ಇಚ್ಛೆಯಿತ್ತು. ಆದಕ್ಕಾಗಿ ಆ್ಯಂಟ್ವರ್ಪಕ್ಕೆ ತಿಕೀಟು ಸಹ ಕೊಂಡಿದ್ದರು. ಇಷ್ಟರಲ್ಲಿ ಇವರಿಗೆ ಮಿಲಿಟರಿ ಪಾಸ್‌ಪೋರ್ಟ ಕಚೇರಿಯಿಂದ ಕರೆಬಂತು. ಆ ಕಚೇರಿಗೆ ಹರಡೀ-ಕರರಿಗೆ ಸಂಬಂಧಿಸಿದ ಸರಕಾರೀ ರಿಪೋರ್ಟು ಬಂದಿದ್ದುವು. ಅವರು ಅಲ್ಲಿಗೆ ಹೋದಕೂಡಲೆ ಅಧಿಕಾರಿಗಳು ' ನೀವು ಮಾಡಿದ ಪ್ರತಿಯೊಂದು ಭಾಷಣದ ಪ್ರತಿಯೊಂದು ಶಬ್ದವನ್ನೂ ನಾವು ಹೇಳಬಲ್ಲೆ, ಯುದ್ಧದ ಸ್ಥಳಗಳನ್ನು ನೋಡಲು ನಿಮಗೆ ಅಪ್ಪಣೆ ದೊರೆಯಲಾರದು. ನೀವು ಹಿಂದುಸ್ತಾನಕ್ಕೆ ಹೋಗುತ್ತಿದ್ದರೆ ಲಂಡನ್‌ದಿಂದ ಹಡಗದಲ್ಲಿ ಕುಳಿತು ಕೊಂಡು ನೇರವಾಗಿ ಮುಂಬಯಿಗೆ ಸೇರಬೇಕು.' ಎಂದು ಹೇಳಿದರು. ಆ್ಯಂಟ್ವರ್ಪಕ್ಕೆ ತೆಗೆದುಕೊಂಡ ತಿಕೀಟಿನ ಹಣವು ತಿರಿಗಿ ಸಿಕ್ಕಿತು. ಲಂಡನ್‌ದಿಂದ ಉಗಿಬಂಡಿಯಲ್ಲಿ ಕುಳಿತು ಮಾರ್ಶೆಲ್ಸ್‌ದ ಮಾರ್ಗವಾಗಿ ಹಿಂದುಸ್ಥಾನಕ್ಕೆ ಬರಲು ರೈ. ಆ. ಶ್ರೀನಿವಾಸ ಶಾಸ್ತ್ರಿಗಳ ಸಹಾಯದಿಂದ ಸರಕಾರದ ಅಪ್ಪಣೆ ಪಡೆದು,೧೯೨೧ನೇ ನವಂಬರ್ ೧೧ಕ್ಕೆ ಮುಂಬಯಿಯನ್ನು ತಲ್ಪಿದರು.

ಹರಡೀಕರರ ಸ್ವಾಗತಕ್ಕೆ ಕೇಸರೀ, ಮರಾಠಾ ಪತ್ರಿಕೆಗಳ ಸಂಪಾದಕ ಮಂಡಲದವರೂ, ಡಾಕ್ಟರರ ಅಣ್ಣಂದಿರೂ, ಶೇವಡೆಯವರ ಮನೆಯ ಜನರೂ ಬಂದರಕ್ಕೆ ಬಂದಿದ್ದರು. ಮುಂಬಯಿಯಲ್ಲಿ ಹಡಗದಿಂದ ಇಳಿಯುವಾಗ ಖಾದಿಯ ಉಡುಪಿನಿಂದಲೇ ಇಳಿಯಬೇಕೆಂದು ಡಾಕ್ಟರರು ನಿರ್ಧರಿಸಿಕೊಂಡಿದ್ದುದರಿಂದ ಏಡನ್ನಿಗೇ ಬಟ್ಟೆ ಕಳಿಸಬೇಕೆಂದು ತಮ್ಮ ಜನರಿಗೆ ಮೊದಲೇ ತಿಳಿಸಿದ್ದರು. ಅದು ಸಾಧ್ಯವಾಗದಿದ್ದುದರಿಂದ ಬಟ್ಟೆಗಳು ಬಂದರಕ್ಕೆ ಬಂದಿದ್ದವು. ಅವುಗಳನ್ನು ತೊಟ್ಟುಕೊಂಡೇ ಡಾಕ್ಟರರು ಕೆಳಗೆ ಇಳಿದರು. ಊರಲ್ಲಿ ಬಂದಕೂಡಲೇ ಚೌಪಾಟಿಯ ಮೇಲೆ

ತಮ್ಮ ಪರಮಗುರುಗಳಾದ ಲೋ. ತಿಲಕರ ದೇಹದ ಅಗ್ನಿಸಂಸ್ಕಾರ ಮಾಡಿದ ಸ್ಥಳದ ದರ್ಶನ ತೆಗೆದುಕೊಂಡರು. ಆ ಮೇಲೆ ಲಾಲಾಜಿಯವ ವರಿಗೆ 'ನಾನು ತಮ್ಮನ್ನು ಕಾಣಲಿಚ್ಛಿಸುವೆ. ಎಲ್ಲಿಗೆ ಬರಲಿ? ಎಂದು ತಂತಿಯನ್ನು ಕಳಿಸಿದರು. ಅದೇ ನವಂಬರ್ ೧೭ಕ್ಕೆ ಕಾಂಗ್ರೆಸ್ ವರ್ಕಿಂಗ್ ಕಮೀಟಿಗಾಗಿ ಲಾಲಾಜಿಯವರು ಮುಂಬಯಿಗೆ ಬರುವ ರೆಂದು ತಿಳಿಯಿತು. ಅದೇ ಸಂಜೆಗೆ **'ಅಮೇರಿಕೆಯ ಜೀವನ, ಅಲ್ಲಿ ತಾವು ಮಾಡಿದ ಕಾರ್ಯ'** ಎಂಬ ವಿಷಯವನ್ನು ಕುರಿತು ಅಲ್ಲಿಯೂ, ರಾತ್ರಿ ಪುಣೆಯಲ್ಲಿಯೂ ಮಾತನಾಡಿದರು.

ಪುಣೆಯಿಂದ ಹುಬ್ಬಳ್ಳಿ-ಕಲಘಟಗಿಗೆ ಹೋಗಿ ಬಳಗದವರನ್ನು ಕಂಡು ೧೭ಕ್ಕೆ ಮುಂಬಯಿಗೆ ಹೊರಟರು. ಅಲ್ಲಿ ಲಾಲಾಜಿಯವರನ್ನು ಕಂಡು ಇಲ್ಲಿಗೆ ಬಂದನಂತರದ ಅಮೇರಿಕೆಯ ಕಾರ್ಯದ ವರದಿಯನ್ನು ವಿವರಿಸಿದರು. ನಂತರ ಲಾಲಾಜಿಯವರು ಹರಡೀಕರರನ್ನು ಮ. ಗಾಂಧಿ, ಮೋತಿಲಾಲನೇಹರು, ಚಿತ್ತರಂಜನದಾಸ, ಅಲ್ಲೀ ಬಂಧುಗಳಿಗೆ ಪರಿಚಯ ಮಾಡಿಕೊಟ್ಟರು.

ಮುಂಬಯಿಯಿಂದ ಕ. ಪ್ರಾ. ಕಾ. ಕಮೀಟಿಯ ಸಭೆಗಾಗಿ ವಿಜಾಪುರಕ್ಕೆ ಬರಲು ಪ್ರಾಂತಿಕ ಕಮಿಟಿಯವರು ಹರಡೀ ಕರರು ಹಿಂದುಸ್ಥಾನದ ವಿಷಯವಾಗಿ ಅಮೇರಿಕೆಯಲ್ಲಿ ಮಾಡಿದ ಕಾರ್ಯಕ್ಕಾಗಿ ಅಭಿನಂದಿಸಿ, ಈ ಕಮಿಟಿಯ ಕಾರ್ಯದರ್ಶಿಗಳಾಗಿ ಕರ್ನಾಟಕದಲ್ಲಿ ಕೆಲಸ ಮಾಡಬೇಕೆಂದು ಗೊತ್ತುವಳಿ ಮಾಡಿದರು. ಡಾಕ್ಟರರು ಗುರುಗಳಾದ ಲಾಲಾಜಿಯವರು, ಅಮೇರಿಕೆಯಲ್ಲಿದ್ದಾಗ ಸಹಾಯ ಮಾಡಿದ ನ. ಚಿ. ಕೇಳಕರರು, ಅಪ್ಪಣೆಕೊಡದ ಹೊರತು ನನಗೆ ಇಲ್ಲಿರಲು ಬರುವಂತಿಲ್ಲವೆಂದರು. ಕೌಜಲಗಿ ಶ್ರೀನಿವಾಸರಾಯರು ಕೂಡಲೇ ಅವರಿಬ್ಬರಿಗೂ ಬರೆದು ಅಪ್ಪಣೆ ತರಿಸಿದರು. ಡಾಕ್ಟರರಿಗೆ ಸಹ ಆವರಿಬ್ಬರಿಂದ ಪತ್ರಗಳು ಬಂದವು. ಮುಂದೆ ಒಂದು ವರ್ಷದ ವರೆಗೆ ಕಾರ್ಯದರ್ಶಿಗಳಾಗಿ ಕೆಲಸ ಮಾಡಿದುದಲ್ಲದೆ ಪ್ರಾಂತಿಕ ಕಾಂಗ್ರೆಸ್ ಕಮೀಟಿಯವರು ಸ್ಥಾಪಿಸಿದ ಸ್ವಯಂಸೇವಕ ಸಂಘವನ್ನು ಸಾಗಿಸಿದರು.

೧೯೨೧ರ ಅಹಮ್ಮದಾಬಾದಿನ ಕಾಂಗ್ರೆಸ್ಸಿನ ನಂತರ ಗಾಂಧಿಯವರು ಡಾಕ್ಟರರನ್ನು ಕರೆಯಿಸಿಕೊಂಡು **'ಯಂಗ್ ಇಂಡಿಯಾ'**ದ ಅಂಗವಾದ '**ಕಾಂಗ್ರೆಸ್ ಬುಲೆಟಿನ್**' ಎಂಬ ಪತ್ರದ ಸಂಪಾದಕರಾಗಲು ಹೇಳಿದರು. ಡಾಕ್ಟರರು ಅದಕೊಪ್ಪಿ, ಎಲ್ಲ ವಿಷಯವನ್ನೂ ಸಜ್ಜುಗೊಳಿಸಿದರು. ಅದು ಪ್ರಕಟವಾಗುವಷ್ಟರಲ್ಲಿ ಮಹಾತ್ಮಾಜಿಯವರನ್ನು ಸೆರೆಹಿಡಿದರು. ಗಾಂಧಿಯವರ ನಂತರ ವಿಠ್ಠಲಭಾಯಿ ಪಟೇಲರೆ ಉಳಿದ ಹಿರಿಯರು.ಅವರಿಗೆ ಬುಲೆಟಿನ್ ನಡಿಸುವ ಮನಸ್ಸಿರಲಿಲ್ಲ. ಡಾಕ್ಟರರಿಗೆ ಬಿಡುವ ಮನಸ್ಸಿರಲಿಲ್ಲ. ಈ ಮತಭೇದವು ಸೆರೆಮನೆಯಲ್ಲಿದ್ದ ಮಹಾತ್ಮಾಜಿಯವರ ಕಿವಿಯವರೆಗೂ ಹೋಗಿ ಅವರ ಅಪ್ಪಣೆಯಮೇರೆಗೆ ಅದನ್ನು ನಿಲ್ಲಿಸಿದರು. ಡಾಕ್ಟರರು ಅಖಿಲಭಾರತೀಯ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಗಳಾಗಿ ಕೆಲಸ ಮಾಡಬೇಕೆಂದು ವಿಠ್ಠಲಭಾಯಿಯವರ ಇಚ್ಛೆಯಿದ್ದಿತು. ಆದರೆ ಹರಡೀಕರರು ತಮ್ಮ ಸೋದರಳಿಯಂದಿರಾದ ಲೋಕರೆ ಭಾಸ್ಕರರಾಯರನ್ನು ಆ ಕಾರ್ಯಕ್ಕಾಗಿ ಬಿಟ್ಟು ಹುಬ್ಬಳ್ಳಿಗೆ ಬಂದರು. ಮುಂದೆ ಭಾಸ್ಕರರಾಯರೂ ಹುಬ್ಬಳ್ಳಿಗೆ ಬಂದು ಡಾಕ್ಟರರ ಕಾರ್ಯದಲ್ಲಿ ಸೇರಿದರು.

## ಪ್ರಾರಂಭಿಸಿದ ಸಂಸ್ಥೆಗಳು

೧೯೨೨ರಲ್ಲಿ ಡಾಕ್ಟರರು ಹುಬ್ಬಳ್ಳಿಗೆ ಬಂದ ಕೂಡಲೇ **ಭಗಿನೀ ಮಂಡಲ, ವಾರ್ತಾಪ್ರಸಾರಕ ಸಂಘ, ಪ್ರಬುದ್ಧ ವರ್ಗ, ರಾಷ್ಟ್ರಸೇನಾ ಮಂಡಲ, ಗಣೇಶ ಮಂಡಲ**ಗಳನ್ನು ಸ್ಥಾಪಿಸಿದರು.

ಹುಬ್ಬಳ್ಳಿಯ ಸ್ತ್ರೀಯರಲ್ಲಿ ಸಂಘಟನೆ ಯಾಗಿ ರಾಷ್ಟ್ರಸೇವೆ ಮಾಡಲು ಅವರಲ್ಲಿ ಶಕ್ತಿಯನ್ನುಂಟು ಮಾಡುವುದಕ್ಕೆ ಹುಬ್ಬಳ್ಳಿಯ ಭಗಿನೀ ಮಂಡಲವು ೧೯೨೨ನೇ ಜಾನೆವರಿ ೧೮ರಲ್ಲಿ ಸ್ಥಾಪಿತವಾಯಿತು. ಮುಂದೆ ಒಂದು ವರ್ಷದಲ್ಲಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸ್ತ್ರೀಯರ ಸಂಘಟನೆಗಾಗಿ ೧೪ ಸಂಸ್ಥೆಗಳನ್ನು ಸ್ಥಾಪಿಸಿ, ಅವೆಲ್ಲವನ್ನೂ ಒಂದೇ ಕಟ್ಟಿನಲ್ಲಿ ತರುವ ಉದ್ದೇಶದಿಂದ **ಕರ್ನಾಟಕ ಪ್ರಾಂತಿಕ ಭಗಿನೀ ಮಂಡಲ**ವನ್ನು ಸ್ಥಾಪಿಸಲಾಯಿತು. ಶ್ರೀಮತಿ ಕುಂದಾಪುರ

ಉಮಾಬಾಯಿಯವರು ಆದರ ಕಾರ್ಯದರ್ಶಿಗಳಾದರು. ಡಾಕ್ಟರರು ತಮ್ಮ ಕಾರ್ಯದ ಜೊತೆಗೆ ಭಗಿನೀ ಮಂಡಲದ ಕೆಲಸವನ್ನು ಸಾಗಿಸುತ್ತಿದ್ದರು. ಭಗಿನೀ ಮಂಡಲದ ವತಿಯಿಂದಲೇ ಹುಬ್ಬಳ್ಳಿಯಲ್ಲಿ **ತಿಲಕ ಕನ್ಯಾ ಶಾಲೆ**ಯು ಆರಂಭವಾಯಿತು. ಮೇಲಿನ ಸಂಸ್ಥೆಗಳಲ್ಲಿ ಕೆಲವು ೧೯೩೩ರ ವರೆಗೆ ಚೆನ್ನಾಗಿ ಕೆಲಸ ಮಾಡಿದುವು. ಆದೇವರುಷ ಅವು ಕಟ್ಟಳೆಗೆಟ್ಟ ಸಂಸ್ಥೆಗಳೆಂದು ಸರಕಾರವು ಸಾರಿದ್ದರಿಂದ ಅವುಗಳ ಕಾರ್ಯವು ನಿಂತಿತು. ಹರಡೀಕರರು ಅಖಿಲ ಭಾರತೀಯ ಚಟುವಟಿಕೆಗಳಲ್ಲಿ ಭಾಗವಹಿಸಲುಪಕ್ರಮಿಸಿದ ಮೇಲೆ ಇತರ ಪ್ರಾಂತಗಳ ಸ್ತ್ರೀಯರಲ್ಲಿ ಸಂಘಟನೆಯನ್ನುಂಟು ಮಾಡಲು ಹೆಣಗಿದರು. ಕಾರ್ಯಬಾಹುಲ್ಯದ ಮೂಲಕ ಅದಕ್ಕೆ ಯಶಸ್ಸು ದೊರೆಯಲಿಲ್ಲ.

ವಾರ್ತಾ ಪ್ರಸಾರಕ ಸಂಘವನ್ನು ಪ್ರಾರಂಭಿಸಿ ಕರ್ನಾಟಕದ ಜ್ಞಾನವು ಉಳಿದ ಪ್ರಾಂತಗಳಿಗೆ,ಉಳಿದವುಗಳ ಜ್ಞಾನವು ಕರ್ನಾಟಕಕ್ಕಾಗುವಂತೆ ಮಾಡಿದರು. ೧೯೨೩ರ ಕೊನೆಗೆ ಕೊಕೊನಾಡಾ ಕಾಂಗ್ರೆಸ್ಸಿನ ವಾರ್ತೆಗಳನ್ನು ಕನ್ನಡಿಗರಿಗೆ ತಿಳಿಸುವುದಕ್ಕೆ 'ವಾರ್ತಾಪತ್ರಿಕೆ'ಯೆಂಬ ದೈನಿಕ ಪತ್ರವನ್ನು ಈ ಸಂಸ್ಥೆಯ ವತಿಯಿಂದಲೇ ಆರಂಭಿಸಿದರು. ಪ್ರಬುದ್ಧವರ್ಗ, ರಾಷ್ಟ್ರಸೇನಾ ಮಂಡಲವೆಂಬ ಸಂಸ್ಥೆಗಳ ಮೂಲಕ ಸ್ವಯಂಸೇವಕರಿಗೆ ಶಿಕ್ಷಣ ಕೊಡುತ್ತಿದ್ದರು. ಸೇವಾದಲವು ಪ್ರಾರಂಭವಾದ ಮೇಲೆ ಅದರಲ್ಲಿ ಇವು ಕೂಡಿಕೊಂಡವು. ಗಣೇಶ ಮಂಡಲವನ್ನು ಸ್ಥಾಪಿಸಿ ಈ ಉತ್ಸವ ಮಾಡುವ ಎಲ್ಲ ಜನರನ್ನು ಒಂದೇ ಕಟ್ಟಿಗೆ ತರಲು ಯತ್ನಿಸಿದರು. ಈ ವರೆಗೆ ಈ ಮಂಡಲದ ಕೆಲಸವು ಹುಬ್ಬಳ್ಳಿಯಲ್ಲಿ ನಡೆಯುತ್ತಲೇ ಇದೆ.

## ಹುಬ್ಬಳ್ಳಿಯಲ್ಲಿ ಇತರ ಕೆಲಸಗಳು

### ತಿಲಕ ಗ್ರಂಥ ಸಂಗ್ರಹ.

ಡಾಕ್ಟರರು ಅಮೇರಿಕೆಯಿಂದ ಬರುವಾಗ ತಾವು ತಂದ, ಶೇವಡೆಯವರ ಮನೆಯಲ್ಲಿದ್ದ, ಪುಸ್ತಕಗಳನ್ನು ಕೂಡಿಸಿ ಒಂದು ಪುಸ್ತಕಾಲಯವನ್ನು **ತಿಲಕ ಗ್ರಂಥ ಸಂಗ್ರಹ**ವೆಂಬ ಹೆಸರಿನಿಂದ ಆರಂಭಿಸಿದರು.

ಸೇವಾದಲವು ಆರಂಭವಾದ ಮೇಲೆ ಅದಕ್ಕೆ ಬರುವ ಮಾಸಿಕ, ವೃತ್ತ ಪತ್ರಿಕೆಗಳನ್ನು ಇದಕ್ಕೆ ಕೊಟ್ಟು, ವಾಚನಾಲಯುವನ್ನೂ ಜೋಡಿಸಿದರು. ೧೯೩೨ರಲ್ಲಿ ಅದು ಕಟ್ಟಳೆಗೆಟ್ಟ ಸಂಸ್ಥೆಯಾಯಿತು. ಆಗ ಅದರಲ್ಲಿ ೧೫೦೦೦ ರೂ. ಬೆಲೆ ಬಾಳುವ ೬೦೦೦ ಪುಸ್ತಕಗಳಿದ್ದುವು. ೧೯೩೧ರಲ್ಲಿ ಈ ಸಂಸ್ಥೆಯು ರಜಿಸ್ಟರ್ ಆಗಿ ಪಂಚರ ವಶದಲ್ಲಿತ್ತು. ೧೯೩೪ರಲ್ಲಿ ಈ ಸಂಸ್ಥೆಯ ಬಂಧನವು ಹೋಯಿತು. ಆದರೆ ಇವರಿಗೆ ಈ ಸಂಸ್ಥೆಯ ಹೆಸರಿನ ಹೊರತಾಗಿ ಏನೂ ದೊರೆಯಲಿಲ್ಲ. ಈ ಗ್ರಂಥಸಂಗ್ರಹದಲ್ಲಿ ದುರ್ಲಭವಾದ ಅಮೌಲ್ಯ ಗ್ರಂಥಗಳೆಷ್ಟೊ ಇದ್ದವು.

## ಶಿಕ್ಷಣ ಪರಿಷತ್ತು

ಶಿಕ್ಷಣ ಕಾರ್ಯದಲ್ಲಿ ಸಂಘಟನೆಯುಂಟುಮಾಡುವುದಕ್ಕಾಗಿ ೧೯೨೦ರಲ್ಲಿ ಕಾಲೇಲಕರರ ಅಧ್ಯಕ್ಷತೆಯಲ್ಲಿ ಹುಬ್ಬಳ್ಳಿಯಲ್ಲಿ ಮೊದಲನೆ ಪರಿಷತ್ತನ್ನು ಕೂಡಿಸಿದರು. ಇತರ ಕಾರ್ಯಗಳ ಮೂಲಕ ಈ ಸಂಬಂಧ ವಾಗಿ ಏನೂ ಪ್ರಗತಿಯಾಗಲಿಲ್ಲ.

## ರಾಷ್ಟ್ರೀಯ ಶಾಲೆ

ಹುಬ್ಬಳ್ಳಿಯ **ಜೋಶಿ ವಿಶ್ವನಾಥರಾಯರು** ೧೯೨೧ರಲ್ಲಿ ರಾಷ್ಟ್ರೀಯ ಶಾಲೆಯನ್ನು ಸ್ಥಾಪಿಸಿದರು. ಅಮೇರಿಕೆಯಿಂದ ಬಂದ ಕೂಡಲೇ ಡಾಕ್ಟರರು ಅದರ ಮುಖ್ಯಾಧಿಕಾರಿಗಳಾಗಿ ನಿಯಮಿತರಾದರು. ಜೋಶಿಯವರು ಸೆರೆಮನೆಗೆ ಹೋಗಲು ತಾಲೂಕ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿತ್ವವು ಇವರ ಪದರಿಗೆ ಬಿತ್ತು. ಮುಂದೆ ೫ ವರ್ಷಗಳ ವರೆಗೆ ಈ ಕೆಲಸವನ್ನು ಮಾಡಿದರು. ಈ ಶಾಲೆಯು ೧೯೨೫ರಲ್ಲಿ ಹಣದ ಕೊರತೆ, ಹುಡುಗರ ಅಭಾವದಿಂದ ಮುಚ್ಚಲಾಯಿತು.

## ಮಾಡರ್ನ್ ಕಮರ್ಶಿಯಲ್ ಇನ್ಸ್ಟಿಟ್ಯೂಟ್

ಈ ಸಂಸ್ಥೆಯನ್ನು ಆರಂಭಿಸಿ ಇದಕ್ಕೆ ಬೇಕಾಗುವ ಜನರನ್ನು, ವಸ್ತುಗಳನ್ನು, ಮುಂಬಯಿಯಿಂದ ತಂದರು. ತಮ್ಮ ಕೆಲಸಗಾರರಿಗೆ

ಶಿಕ್ಷಣ ಹಾಗು ಕೆಲಸ ಕೊಡುವುದಲ್ಲದೆ ಊರ ಜನರಿಗೆ ಉಪಯೋಗ ಮಾಡಿಕೊಡಬೇಕೆಂಬುದೇ ಈ ಸಂಸ್ಥೆಯ ಗುರಿಯಾಗಿತ್ತು.

## ರಾಷ್ಟ್ರಧ್ವಜ ಸತ್ಯಾಗ್ರಹ

ತರುಣರಲ್ಲಿ ಸಂಘಟನೆಯುಂಟುಮಾಡುವುದೆ ತಮ್ಮ ಆದ್ಯಕರ್ತವ್ಯ ವೆಂದು, ಡಾಕ್ಟರರು ಪರದೇಶದಿಂದ ಬಂದ ಕೂಡಲೇ ಅಲ್ಲಲ್ಲಿಯ ತರುಣರನ್ನು ತಮ್ಮ ಗುಂಪಿಸಲ್ಲಿ ಎಳೆದುಕೊಳ್ಳತೊಡಗಿದರು. ಹುಬ್ಬಳ್ಳಿಯ ಕೆಲವು ತರುಣರು ಇವರಿಗಾಗಿ ೨೪ ಗಂಟೆ ದುಡಿಯಲು ಟೊಂಕಕಟ್ಟಿದರು. ಇವರಲ್ಲಿ ಕೆಲವರನ್ನು ಸಂಗಡ ತೆಗೆದುಕೊಂಡು ೧೯೨೨–೨೩ರಲ್ಲಿ ಕರ್ನಾಟಕವನ್ನೆಲ್ಲ ಸುತ್ತಿದರು. ಈ ಪ್ರವಾಸದಲ್ಲಿ ಸ್ವಯಂಸೇವಕರ ಸಂಘಟನೆ, ಭಗಿನೀ ಮಂಡಲಗಳ ಬಗ್ಗೆ, ಜನರಿಗೆ ತಿಳಿಹೇಳಿ ಸಹಾನುಭೂತಿಯನ್ನು ಸಂಪಾದಿಸಿದರು. ಈ ರೀತಿ ಕರ್ನಾಟಕವನ್ನು ಎರಡು ಸಲ ಸುತ್ತಿದರು. ಪ್ರವಾಸದಲ್ಲಿ ಸಿಕ್ಕಿದ ಉತ್ತಮ ತರುಣರನ್ನು ತಮ್ಮ ಕಾರ್ಯಕ್ಕೆ ಸೇರಿಸಿಕೊಂಡರು.

ಮುಂದೆ ಎಪ್ರಿಲ್ ೧೩ಕ್ಕೆ **ನಾಗಪುರ ಸತ್ಯಾಗ್ರಹ**ವು ಪ್ರಾರಂಭವಾಯಿತು. ಪ್ರತಿಯೊಂದು ಪ್ರಾಂತದವರು ಆರಾರು ಸ್ವಯಂಸೇವಕರನ್ನು ಕಳಿಸಬೇಕೆಂದು ಮುಂದಾಳುಗಳ ಅಪ್ಪಣೆಯಾದುದರಿಂದ, ಡಾಕ್ಟರರು ಈ ಮೊದಲಿನಿಂದಲೇ ತಮ್ಮ ಸಂಗಡ ಕೆಲಸ ಮಾಡುತ್ತಿದ್ದ ಕೆಲವು ಸಂಗಡಿಗರೊಂದಿಗೆ ನಾಗಪುರಕ್ಕೆ ಹೋದರು. ಈ ಸತ್ಯಾಗ್ರಹದಲ್ಲಿ ಹರಡೀಕರರು ಸ್ವತಃ ಭಾಗತೆಗೆದುಕೊಳ್ಳದೆ ಹಿಂದೆ ಬೆಂಬಲಕ್ಕೆ ನಿಂತು ಸಂಗ್ರಾಮವನ್ನು ಸಾಗಿಸಬೇಕೆಂದು ಗೊತ್ತಾಗಿತ್ತು. ಆದರೆ ಡಾಕ್ಟರರನ್ನೂ ಅವರ ಸಂಗಡಿಗರನ್ನೂ ಸರಕಾರವು ಸೆರೆಹಿಡಿಯಿತು. ಇದರಲ್ಲಿ ಇವರಿಗೆ ಒಂದು ವರ್ಷದ ಸಶ್ರಮ ಶಿಕ್ಷೆಯಾಯಿತು. ಮುಂದೆ ಆ ಸತ್ಯಾಗ್ರಹವು ಮುಗಿದು ರಾಷ್ಟ್ರವು ವಿಜಯಿಯಾದುದರಿಂದ ೩–೪ ತಿಂಗಳಲ್ಲಿ ಎಲ್ಲರೂ ಬಿಡುಗಡೆಯಾದರು.

# ಕರ್ನಾಟಕದ ಏಳ್ಗೆ

ರಾಷ್ಟ್ರವು ಜಯಶೀಲವಾಗಲು ಮೂಲಕಾರಣಗಳೆಷ್ಟೇ ಇದ್ದರೂ ನಿಮಿತ್ತಕ್ಕೆ ತರುಣಸೈನಿಕರ ತಂಡವೇ ಬೇಕು. ಪಾರತಂತ್ರ್ಯಕ್ಕೆ ಹೇಸಿ ಸ್ವಾತಂತ್ರ್ಯದ ಹಸಿವೆಯಿಂದ ಶೌರ್ಯ ಧೈರ್ಯ ಸಾಹಸಗಳೊಡನೆ ಜೀವದ ಹಂಗುದೊರೆದು ಸಮರಕ್ಕೆ ಸಜ್ಜಾಗುವವರು ಕೆಚ್ಚೆದೆಯ ತರುಣರೇ. ಏಳನೆಯ ಶತಮಾನದಲ್ಲಿ ಉತ್ತರ ಭಾರತವನ್ನು ಗೆದ್ದ ಹರ್ಷನನ್ನು ಹೊಡೆದೋಡಿಸಿದ ಬದಾಮಿಯ ಪುಲಿಕೇಸಿಗೆ, ಹಿಂದೂಧರ್ಮ ಸಂಸ್ಕೃತಿಗಳಿಗಾಗಿ ಯವನರನ್ನು ಎದುರಿಸಿದ ವಿಜಯನಗರದ ವಿದ್ಯಾರಣ್ಯಗೆ, ಈ ಕೆಚ್ಚೆದೆಯ ಕಲಿಗಳೇ ಸಹಾಯಕರು. ರಾಷ್ಟ್ರದ ಸಂಕಟವ ನೀಗಿಸಲು "ಒಂದು ಹೊಡೆತ ಎರಡು ತುಂಡೆಂದು" ಕಾರ್ಯಕ್ಕೆ ಸಿದ್ಧರಾಗುವವರು ಸೈನಿಕರಲ್ಲದೆ ಮತ್ತಾರು? ಹಿಂದೆ ಶೌರ್ಯ–ಸಾಹಸಗಳಿಂದ ಸಿದ್ಧರಾದ ತರುಣರು ಬೇಕಾದರೆ, ಇಂದು ಸತ್ಯ-ಅಹಿಂಸೆಗಳಿಂದ ಸಜ್ಜಾದ ಸೈನಿಕರು ಬೇಕಾದರು. ಇಂತಹ ಸೈನಿಕರ ಸಜ್ಜುಗೊಳಿಸುವ ಶ್ರೇಯಸ್ಸು ಹಿಂದಿನಂತೆಯೇ ಇಂದೂ ಕನ್ನಡನಾಡಿಗೇ ಬಂದಿತು. ಸೇವಾದಲವು ಹುಟ್ಟಿದುದು ಕನ್ನಡನಾಡಿನಲ್ಲಿ; ಬೆಳೆದುದು ಭಾರತದಲ್ಲಿ. ಸಾವಿರಾರು ತರುಣರಿಗೆ ಶಿಕ್ಷಣಕೊಟ್ಟು ಸೈನಿಕರ ಮಾಡಿದುದು ಸೇವಾದಲ. ಶಾಂತರೀತಿಯಿಂದ ಸತ್ಯ-ಅಹಿಂಸೆಗಳ ಬಿಡದೆ ಸ್ವಾತಂತ್ರ್ಯಕ್ಕಾಗಿ ಹೆಣಗಿದುದು ಸೇವಾದಲ. ಅವ್ಯವಸ್ಥೆಯನ್ನಳಿದು, ಅಚ್ಚುಕಟ್ಟುತನದಿಂದ ಸತ್ಯಾಗ್ರಹವ ಸಾಗಿಸಲು ನೆರವಾದುದು ಸೇವಾದಲ.

೧೯೨೩ ರ ಕೋಕೊನಾಡ ಕಾಂಗ್ರೆಸ್ಸಿನಲ್ಲಿ ಮೂರ್ತಸ್ವರೂಪವನ್ನು ಪಡೆದ **ಈ ಸೇವಾದಲ ಸಂಸ್ಥೆಯ ಹುಟ್ಟಿಗೆ ಆಂಗ್ಲಭಾಷೆಯ**

**ನ್ನರಿಯುದ ಅಚ್ಚಗನ್ನಡಿಗರೇ ಕಾರಣರಿರುವರೆಂದರೆ ಯಾರಿಗೆ ಅಚ್ಚರಿಯೆನಿಸಲಿಕ್ಕಿಲ್ಲ!** ಈಸಾಹಸದ ಕನ್ನಡಿಗರನ್ನೇ ಕೂಡಿಕೊಂಡು ಡಾ. ಹರಡೀಕರರು ಸೇವಾದಲದ ಸಂಸ್ಥೆಯನ್ನು ಮೊದಲು ಹುಬ್ಬಳ್ಳಿಯಲ್ಲಿ ಪ್ರಾರಂಭಿಸಿದರು. ಡಾಕ್ಟರರಿಗೇನೋ ಚಿಕ್ಕಂದಿನಿಂದಲೂ ಸೈನಿಕ ಶಿಕ್ಷಣದ ಕಡೆಗೆ ಹೆಚ್ಚು ಲಕ್ಷ್ಯ. ಅಮೇರಿಕೆಯಿಂದ ಬಂದಾಗ ಕರ್ನಾಟಕ ಪ್ರಾಂತಿಕ ಸಭೆಯುವರು ಪ್ರಾರಂಭಿಸಿದ **ಸ್ವಯಂಸೇವಕ ಮಂಡಲ**ವನ್ನು ನಡೆಯಿಸಿ, **ಪ್ರಬುದ್ಧ ವರ್ಗವೆಂಬ** ಸೈನಿಕ ಶಿಕ್ಷಣದ ವರ್ಗವನ್ನು ತೆರೆದು, ಕೊನೆಗೆ ಸೇವಾದಲವನ್ನು ಹುಟ್ಟಿಸಿ, ಅದಕ್ಕೆ ೧೯೨೩ರಲ್ಲಿ ಅಖಿಲ ಭಾರತ ಸಂಸ್ಥೆಯ ಸಂಸ್ಕಾರ ಮಾಡಿದರು. ನಾಗಪೂರ ರಾಷ್ಟ್ರಧ್ವಜ ಸತ್ಯಾಗ್ರಹವೇ ಈ ಅಖಿಲ ಭಾರತೀಯ ಸಂಸ್ಕಾರಕ್ಕೆ ಕಾರಣ.

ನಾಗಪುರದಲ್ಲಿ ರಾಷ್ಟ್ರಧ್ವಜ ಸತ್ಯಾಗ್ರಹವನ್ನು ಮಾಡಿ ದೇಶದ ಎಲ್ಲ ಭಾಗಗಳ ಜನರು ನಾಗಪೂರ ಹಾಗೂ ಎಡಬಲದ ಕಾರಾಗ್ರಹ ಗಳಲ್ಲಿ ವಾಸವಾಗಿದ್ದರು. ಅಲ್ಲಿಯ ಸ್ವಯಂಸೇವಕರಲ್ಲಿಯ ಅಧೈರ್ಯ, ಅವ್ಯವಸ್ಥೆ, ಅಜ್ಞಾನ ಇವೇ ಮೊದಲಾದ ಕೊರತೆಗಳನ್ನು ಕಂಡು, ಅಲ್ಲಿ ಕೂಡಿದ ಎಲ್ಲ ಮುಂದಾಳುಗಳು ಆಲೋಚಿಸಿ, ದೇಶದ ತರುಣರಲ್ಲಿ ಸಂಘಟನೆಯನ್ನುಂಟು ಮಾಡಿ, ದೇಶಸೇವೆಗೆ ಸಜ್ಜು ಮಾಡುವಂತಹ ಶಿಕ್ಷಣವನ್ನು ಕೊಡುವ ಒಂದು ಸಂಸ್ಥೆಯನ್ನು ಸ್ಥಾಪಿಸತಕ್ಕದ್ದೆಂದು ನಿಶ್ಚಯಿಸಿಕೊಂಡರು. ಕಾರಾಗ್ರಹದಿಂದ ಸ್ವಲ್ಪೇ ದಿನಗಳಲ್ಲಿ ಎಲ್ಲರೂ ಬಿಡುಗಡೆ ಹೊಂದಿದರು. ಅದೇ ಸಪ್ಟಂಬರ ತಿಂಗಳು ದಿಲ್ಲಿಯಲ್ಲಿ ಕಾಂಗ್ರೆಸ್ಸಿನ ಹೆಚ್ಚಿನ ಅಧಿವೇಶನವು ಕೂಡುವದಿತ್ತು. ಸತ್ಯಾಗ್ರಹಿಗಳೆಲ್ಲರೂ ದಿಲ್ಲಿಯಲ್ಲಿ ಕೂಡಿ, ಒಂದು ತಾತ್ಪೂರ್ತಿಕ ಮಂಡಳವನ್ನು ಸ್ಥಾಪಿಸಿ, ಅದ ರಿಂದ ಪ್ರಚಾರ,ಹಣಕೂಡಿಸುವದೇ ಮೊದಲಾದ ಕಾರ್ಯಗಳನ್ನು ಮಾಡ ಬೇಕೆಂದು ನಿರ್ಣಯಿಸಿದರು. ಇದಕ್ಕಾಗಿ ಡಾ. ಹರಡೀಕರರೂ, **ದಿವಾಕರ ರಂಗರಾಯರೂ** ದಿಲ್ಲಿಗೆ ಹೊರಟಾಗ್ಗೆ ಆ ವಿಷಯವಾಗಿ ಕಾರ್ಯ ಮಾಡುವದನ್ನೆಲ್ಲ ನಿಶ್ಚಯಿಸಿಕೊಂಡಿದ್ದರು. ಆ ಬಳಿಕ ಡಾ. ಹರಡೀಕರರು ಇಡೀ ಹಿಂದುಸ್ಥಾನದಲ್ಲೆಲ್ಲ ತಿರುಗಾಡಿ, ಎಲ್ಲ

ಮುಖಂಡರಿಗೆ ಸ್ವಯಂಸೇವಕ ಸಂಸ್ಥೆಯ ಅವಶ್ಯಕತೆಯ ವಿಚಾರವನ್ನು ಹೇಳಿ ಅವರೆಲ್ಲರ ಅಭಿಪ್ರಾಯವನ್ನು ಕೇಳಿಕೊಂಡರು.

ಅದೇ ವರ್ಷ ಡಿಸೆಂಬರದಲ್ಲಿ ಕೋಕೋನಾಡದಲ್ಲಿ ಕಾಂಗ್ರೆಸ್ಸು ಕೂಡಲು, ಅಲ್ಲಿ ಅಖಿಲಭಾರತೀಯ ಸ್ವಯಂಸೇವಕರ ಪರಿಷತ್ತನ್ನು ಕೂಡಿಸಿ "**ಹಿಂದುಸ್ಥಾನೀ ಸೇವಾದಲ**" ವೆಂಬ ಸಂಸ್ಥೆಯನ್ನು ಸ್ಥಾಪಿಸುವ ಗೊತ್ತುವಳಿಯನ್ನು ಮಾಡಿದರು. ಈ ಹೊಸ ಸಂಸ್ಥೆಗೆ ಕಾಂಗ್ರೆಸ್ಸು ಸಹ ತನ್ನ ಒಪ್ಪಿಗೆಯನ್ನಿತ್ತು, ಆಂತರಿಕ ವ್ಯವಸ್ಥೆಯನ್ನು ಸೇವಾದಲದ ವ್ಯವಸ್ಥಾಪಕರಿಗೆ ಬಿಟ್ಟು ಕೊಟ್ಟು, ಮೇಲ್ವಿಚಾರಣೆಯನ್ನು ತನ್ನ ಕೈಯಲ್ಲಿಟ್ಟುಕೊಂಡಿತು.

## ಬೆಳಗಾಂವಿ ಕಾಂಗ್ರೆಸ್

೧೯೨೪ ನೇ ಇಸ್ವಿಯಲ್ಲಿಯ ಕಾಂಗ್ರೆಸಿನ ಅಧಿವೇಶನವು ಕರ್ನಾಟಕ ದಲ್ಲಿ ಕೂಡಲು, ಸ್ವಯಂಸೇವಕ ವಿಭಾಗವನ್ನು ಡಾ. ಹರಡೀಕರರ ಕಡೆಗೆ ಕೊಟ್ಟರು. ಅದಕ್ಕಾಗಿ ಅವರು ೫-೬ ತಿಂಗಳು ಮೊದಲಿನಿಂದಲೇ ಕರ್ನಾಟಕದ ತರುಣ ತರುಣಿಯರಿಗೆ ಶಿಸ್ತಿನ ಶಿಕ್ಷಣಕೊಟ್ಟು, ಸಾವಿರಾರು ಸ್ವಯಂಸೇವಕರನ್ನು ಕೂಡಿಸಿ, ಕಾಂಗ್ರೆಸ್ಸಿನ ಕಾರ್ಯವನ್ನು ಯಾರೂ ಮಾಡದಷ್ಟು ಉತ್ಕೃಷ್ಟ ರೀತಿಯಿಂದ ಯಶಸ್ವಿಯನ್ನಾಗಿ ಮಾಡಿದರು. ಹಿಂದುಸ್ಥಾನದ ಬೇರೆ ಬೇರೆ ಭಾಗಗಳಿಂದ ಬಂದ ಜನರು ಕರ್ನಾಟಕದ ಸ್ವಯಂಸೇವಕರ ಕಾರ್ಯವನ್ನು ನೋಡಿ ಬೆರಳು ಕಚ್ಚಿದ್ದರಿಂದಲೇ ಡಾ. ಹರಡೀಕರರ ಕಾರ್ಯ ಪದ್ಧತಿ-ಹಿಂದುಸ್ಥಾನೀ ಸೇವಾದಲದ ಹೆಸರು ಎಲ್ಲ ಕಡೆಗೆ ಹರಡಿತು. ಇದೇ ಕಾರಣದಿಂದ **ಕಾನ್ಪುರದ** ಮುಖಂಡರು ಮುಂದಿನ ವರ್ಷ ತಮ್ಮಲ್ಲಿ ಕಾಂಗ್ರೆಸ್ಸು ಕೂಡಿದಾಗ್ಗೆ ಸೇವಾದಲದವರು ಬಂದು ಸ್ವಯಂಸೇವಕ ವಿಭಾಗದ ಕಾರ್ಯವನ್ನು ಯಶಸ್ವಿಯನ್ನಾಗಿ ಮಾಡಬೇಕೆಂದು ಬೆಳಗಾವಿಯಲ್ಲಿಯೇ ಆಮಂತ್ರಣ ವಿತ್ತುಹೋದರು.

## ಶುಶ್ರೂಷಾ ಪಥಕ

**೧೯೨೭**ನೆಯ ಇಸ್ವಿಯಲ್ಲಿ ಚೀನದೇಶದಲ್ಲಿ ಅವರವರೊಳಗೆ ಯುದ್ಧವು ನಡೆದಿರಲು, ರಾಷ್ಟ್ರೀಯ ಸೇನಾಪತಿಯಾದ **ಚೆಂಗ-ಇ-ಶೇಕನ**

ಹೆಸರು ಎಲ್ಲ ಕಡೆಗೂ ಕೇಳಿಬರುತ್ತಿತ್ತು. ಅವನ ವಿಷಯಕ್ಕೆ ಡಾ. ಹರಡೀಕರರ ಸಹಾನುಭೂತಿಯು ಯಾವ ಕಾರಣದಿಂದಲೋ ಉಂಟಾಗಿತ್ತು. " ಅವನಿಗೆ ಸಹಾಯಮಾಡಬೇಕು. ಇದರಿಂದ ನಮ್ಮ ಕರ್ತವ್ಯವನ್ನು ಮಾಡಿದಂತಾಗುವುದಲ್ಲದೆ ನಮ್ಮ ಜನರಿಗೆ ಹೆಚ್ಚಿನ ಅನುಭವವೂ ಶಿಕ್ಷಣವು ದೊರೆಯುತ್ತವೆ. ಹಿಂದುಸ್ಥಾನೀ ಸೇವಾದಲದ ಹೆಸರೂ ಪ್ರಸಿದ್ಧವಾಗುತ್ತದೆ " ಎಂದು ಅವರು ಆಗಾಗ್ಗೆ ಮನಸಿನಲ್ಲಿ ತಂದುಕೊಳ್ಳುತ್ತಿದ್ದರಂತೆ. ಅದೇ ಸಮಯದಲ್ಲಿ ದಿಲ್ಲಿಯ ನಿಟ್ಟಿನಿಂದ ಮುಂಬಯಿ ಕಡೆಗೆ ಪ್ರವಾಸ ಮಾಡುತ್ತಿರಲು, ಉಗಿಬಂಡಿಯಲ್ಲಿ ಕುಳಿತು, ತಲೆ ತುರಿಸಿಕೊಳ್ಳುತ್ತಿರುವಾಗ " ಚೀನದಲ್ಲಿ ಯುದ್ಧಮಾಡುತ್ತ ಗಾಯ ಹೊಂದಿದ ಜನರ ಶುಶ್ರೂಷೆಗೈಯಲು, ಒಂದು ಪಥಕವನ್ನು ಹಿಂದುಸ್ಥಾನೀ ಸೇವಾದಲದ ವತಿಯಿಂದ ಚೀನದೇಶಕ್ಕೇಕೆ ಕಳಿಸಬಾರದು ? " ಎಂದು ಅಂದುಕೊಂಡರು. ತಮ್ಮ ವಿಚಾರವನ್ನು ಹುಬ್ಬಳ್ಳಿಯಲ್ಲಿ ಸೇವಾದಲದ ತಮ್ಮ ಜತೆಗಾರರೆದುರಿಗಿಟ್ಟರು. ಮುಂಬಯಿಗೆ ಬಂದು ಆಲ್ ಇಂಡಿಯಾ ಕಾಂಗ್ರೆಸ ಕಮಿಟಿಯ ಸಭೆಗಾಗಿ ಕೂಡಿದ ಎಲ್ಲ ಸಭಾಸದರಿಗೆ ಆ ವಿಷಯವನ್ನು ಹೇಳಿದರು. ಎಲ್ಲರೂ " ಒಳ್ಳೆಯ " ವಿಚಾರ ಎಂದರು. ಆದಕಾರಣ ಆ ಸಭೆಯಲ್ಲಿ ಒಂದು ಗೊತ್ತುವಳಿಯು ಸ್ವೀಕರಿಸಲ್ಪಟ್ಟು " ಸೇವಾದಲದ ಅಧ್ಯಕ್ಷರು ಈ ವಿಷಯವಾಗಿ ಚೀನದ ರಾಷ್ಟ್ರೀಯ ಸರಕಾರದ ಸಂಗಡ ಪತ್ರವ್ಯವಹಾರ ಮಾಡಬೇಕು. ಈ ಕಾರ್ಯಕ್ಕಾಗಿ ಒಂದು ಲಕ್ಷ ರೂಪಾಯಿಗಳನ್ನು ಕೂಡಿಸಬೇಕೆ"ಂದು ಗೊತ್ತಾಯಿತು. ಶುಶ್ರೂಷಾಪಥಕದ ಮುಖ್ಯಸ್ಥರಾಗಿ ಡಾಕ್ಟರರು, ಆಗಿನ ಆ-ಇ-ಕಾ-ಕಮೀಟಿಯ ಕಾರ್ಯದರ್ಶಿಗಳಲ್ಲೊಬ್ಬರಾದ **ಸ್ವೇಬ್ ಕುರೇಶಿಯವರು** ಚೀನಕ್ಕೆ ಹೋಗಬೇಕೆಂದು ಗೊತ್ತಾಯಿತು. ದೇಶದೊಳಗಿನ ತರುಣ ತರುಣಿಯರು, ಉಳಿದ ಡಾಕ್ಟರ ಜನರು " ನಾ, ನೀ " ನೆಂದು ಹೊರಡಲು ಸಿದ್ಧರಾದರು. ಆದರೆ ಸರಕಾರದವರು ಪಾಸ್ ಪೋರ್ಟ ಕೊಡಲಿಲ್ಲವಾದ್ದರಿಂದ ಎಲ್ಲವೂ ಬರಿಗನಸಾಯಿತು.

ವಾಲಂಟಿಯರ್ ಮಾಸಪತ್ರಿಕೆ.

ಬೆಳಗಾವಿಯ ಕಾಂಗ್ರೆಸ್ಸಿನ ನಂತರ ಹರ್ಡೀಕರರ ಸಂಪಾದಕತ್ವ

ದಲ್ಲಿ '**ವಾಲಂಟಿಯರ್**' ಎಂಬ ಮಾಸಿಕವು ಇಂಗ್ಲೀಷಿನಲ್ಲಿ ಪ್ರಕಟವಾಗ ತೊಡಗಿತು. ಅದರಲ್ಲಿಯ ಕೆಲವು ಭಾಗವು ಹಿಂದೀ ಭಾಷೆಗಾಗಿತ್ತು. ಹಿಂದುಸ್ಥಾನೀ ಸೇವಾದಲದ ಪ್ರಚಾರವನ್ನು ಮಾಡುವುದು, ಸ್ವಯಂ ಸೇವಕ ಅಂದೋಲನದ ಸಂಬಂಧವಾದ ವಾಙ್ಮಯವನ್ನು ನಿರ್ಮಾಣ ಮಾಡುವುದು, ಈ ಮಾಸಿಕದ ಮುಖ್ಯ ಉದ್ದೇಶ. ಹಣಕೊಟ್ಟರೂ ದೊರೆ ಯದಂತಹ ಬರೆಹಗಳನ್ನು ಪ್ರಯತ್ನ, ಪರಿಚಯ, ಸ್ನೇಹಗಳ ಸಹಾಯ ದಿಂದ ಡಾಕ್ಟರರು ದೊರಕಿಸುತಿದ್ದರು. ಈ ಪತ್ರಿಕೆಯನ್ನು ಹಣವಿಲ್ಲದೆ ಪ್ರಾರಂಭ ಮಾಡಿದರು. ಧಾರವಾಡದ ಕರ್ನಾಟಕ ಪ್ರಿಟಿಂಗ್ ಪ್ರೆಸ್ಸಿನ ಒಡೆಯರಾದ **ಜತಾರರು** ಇದಕ್ಕೆ ಹೆಚ್ಚಾಗಿ ನೆರವಾದರು. ಮೂರು ವರುಷಗಳ ವರೆಗೆ ಈ ಪತ್ರಿಕೆಯನ್ನು ಧಾರವಾಡದಲ್ಲಿಯೇ ಮುದ್ರಿಸಿ ದರು; ಆ ಮೇಲೆ ಮುಂಬೈಯಲ್ಲಿ. ೧೯೩೦ನೇ ಎಪ್ರಿಲ್ ವರೆಗೆ ನಡೆದು ಸತ್ಯಾಗ್ರವು ಪ್ರಾರಂಭವಾದುದರಿಂದ ಇದು ನಿಂತು ಹೋಯಿತು. ಎಷ್ಟೋ ಗೆಳೆಯರು ನೆರವಾದರೂ ಕೊನೆಯವರೆಗೂ ಅದು ಹಾನಿಯಲ್ಲಿಯೇ ಇದ್ದುದರಿಂದ ಡಾಕ್ಟರರಿಗೆ ಸಾಲವಾಯಿತಲ್ಲದೆ ಅನೇಕ ಮಿತ್ರರ ಸ್ನೇಹಕ್ಕೆ ಭಂಗಬಂದಿತು. ಮರಳಿ ೧೯೩೧ನೇ ನವಂಬರದಲ್ಲಿ ಡಾಕ್ಟರರ ಕೆಲವು ಸಹೋದ್ಯೋಗಿಗಳು ಅದನ್ನು ಪ್ರಾರಂಭಿಸಬೇಕೆಂದು ಯತ್ನಿಸಿದರು. ರಾಜಕೀಯ ವಾತಾವರಣದ ಅನಿಯಮಿತ ಪರಿಸ್ಥಿತಿಯು ಇದಕ್ಕೆ ಅಡ್ಡ ಬಂದಿತು.

## ವ್ಯಾಯಾಮ ವಿದ್ಯಾಪೀಠ

ವ್ಯಾಯಾಮಶಾಲೆಯನ್ನು ಕಟ್ಟಿಸುವುದಕ್ಕೋಸ್ಕರ ಬಾಗಲಕೋಟೆ (ವಿಜಾಪುರ ಜಿಲ್ಲೆ)ಯ ಒಬ್ಬ ಸದ್ಗ್ರಹಸ್ಥರು ಒಂದು ಭೂಮಿಯ ತುಂಡನ್ನು ದಾನವಾಗಿ ಕೊಟ್ಟರು. ಹೀಗೆ ದಾನವಾಗಿ ಕೊಟ್ಟಂದಿನಿಂದ ೩ ವರ್ಷದೊಳಗೆ ಆ ಸ್ಥಳದಲ್ಲಿ ಕಟ್ಟಡವು ಸಿದ್ಧವಾಗಬೇಕು, ಇಲ್ಲದಿದ್ದರೆ ಆ ಸ್ಥಳವು ಪುನಃ ದಾನಕೊಟ್ಟವರ ವಶಕ್ಕೆ, ಎಂದು ನಿಯಮ ಹಾಕಿ ದ್ದರು. ಅದರಿಂದ ಡಾಕ್ಟರರು ಈ ಕೆಲಸಕ್ಕಾಗಿ ಹಣಕೂಡಿಸಲು ಪ್ರಾರಂಭಿ ಸಿದರು. ೧೯೩೭ನೆ ನವಂಬರ ೨೦ಕ್ಕೆ ಆ ಕಟ್ಟಡದ ಅಡಿಗಲ್ಲು ಹೈದರಾಬಾದ

( ದಕ್ಷಿಣ ) ದ ಕನ್ನಡಿಗರಾದ **ನಾಮನನಾಯಿಕರಿಂದ** ಇಡ ಲಾಯಿತು. ಮುಂದೆ ೧೯೩೮ನೇ ಅಗಸ್ಟ ೧ಕ್ಕೇ (ಲೋ. ಪು. ತಿಥಿ) ಕಟ್ಟಡವು ಪೂರ್ಣವಾಗಿ, ಹಿಂದುಸ್ಥಾನೀ ಸೇವಾದಲದ ವ್ಯಾಯಾಮ ವಿದ್ಯಾಪೀಠವು ಅದೇ ಹೈದರಾಬಾದದ **ರಾಜಾಧನರಾಜ ಗಿರಜಿ ಬಹದ್ದೂರರ**ಹಸ್ತದಿಂದ ತೆರೆದು ಪ್ರಾರಂಭಮಾಡಲಾಯಿತು. ಈ ವಿಷಯದಲ್ಲಿ ವಿಜಾಪುರದ **ಕೌಜಲಗಿ ಶ್ರೀನಿವಾಸರಾಯರು** ಬಹಳ ನೆರವಾದರು. ರಾಜಾ ಧನರಾಜ ಗಿರಜಿಯವರು ಕಟ್ಟಡಕ್ಕಾಗಿ ೩೦೦೦ರೂ. ಕೊಟ್ಟರು. ಇಡೀ ಕರ್ನಾಟಕವನ್ನು ಸುತ್ತಿ, ವ್ಯಾಯಾಮ ವಿದ್ಯಾಪೀಠಕ್ಕಾಗಿ ಡಾ. ಹರಡೀಕರರು ಸುಮಾರು ೧೪೦೦೦ ರೂ. ಕೂಡಿಸಿ ವೆಚ್ಚ ಮಾಡಿದರು.

ಹಿಂದುಸ್ಥಾನದ ಬಹುತರ ಎಲ್ಲ ಪ್ರಾಂತಗಳ ತರುಣರು ವಿದ್ಯಾಪೀಠದಲ್ಲಿ ಶಿಕ್ಷಣ ಹೊಂದಿದರು. ೧೯೩೯ರಲ್ಲಿ ಬಾಗಲಕೋಟೆಯಲ್ಲಿಯೇ ಬೆಂಗಳೂರಿನ **ಪ್ರೊ. ಕೆ. ವಿ. ಅಯ್ಯರ**ರ ಅಧ್ಯಕ್ಷತೆಯಲ್ಲಿ **ಕರ್ನಾಟಕ ಶಾರೀರಕ ಶಿಕ್ಷಣ ಪರಿಷತ್ತು** ಕೂಡಿತ್ತು. ಈ ಸಂಬಂಧವಾದ ಕಾರ್ಯವನ್ನು ಮುಂದೆ ಹಾಗೆಯೇ ಸಾಗಿಸಬೇಕೆಂದು ಡಾ. ಹರಡೀಕರರು ನಿಶ್ಚಯಿಸಿದ್ದರು. ಆದರೆ ೧೯೩೦ರಲ್ಲಿ ಆರಂಭವಾದ ಸತ್ಯಾಗ್ರಹದ ತೊಂದರೆಯಿಂದ ಈ ವಿಚಾರವನ್ನು ಬದಿಗಿರಿಸಬೇಕಾಯಿತು. ಆದರೂ ೧೯೩೯ರಲ್ಲಿ ಶಾರೀರಕ ಶಿಕ್ಷಣಕ್ಕೆ ಸಂಬಂಧಪಟ್ಟ ಕೆಲಸವು ಕರ್ನಾಟಕದಲ್ಲಿ ಬಹಳ ನಡೆಯಿತು.

ಸೇವಾದಲಕ್ಕೆ ಕಾಂಗ್ರೆಸ್ಸಿನಿಂದ ಮಾನ್ಯತೆ ಸಿಕ್ಕಿದ್ದರೂ ಎಷ್ಟೋ ಪ್ರಾಂತಗಳು ಅದರೊಡನೆ ಒಮ್ಮನಸ್ಸಿನಿಂದ ಕೆಲಸ ಮಾಡುತ್ತಿರಲಿಲ್ಲ. ಕಾಂಗ್ರೆಸ್ಸಿಗೆ ಒಂದು ಶಿಸ್ತಿನ ಸಂಸ್ಥೆಯು ಬೇಕಿದ್ದಿತು. ಸೇವಾದಲ ಸಂಸ್ಥೆಯು ಬರಬರುತ್ತ ಲೋಕಪ್ರಿಯವಾಗುತ್ತ ನಡೆದು, ಕಾಂಗ್ರೆಸ್ಸಿನ ಕೂಡ ಸ್ಪರ್ಧೆ ಮಾಡುವ ಶಕ್ತಿಯನ್ನು ಸಂಪಾದಿಸಿತು. ಅದಕ್ಕಾಗಿ ಇಂತಹ ಸಂಸ್ಥೆಯನ್ನು ಬೇರೆ ಇಟ್ಟು, ಅದರೊಂದಿಗೆ ಸ್ಪರ್ಧೆ ಮಾಡುವುದಕ್ಕಿಂತ ಅದನ್ನು ಕಾಂಗ್ರೆಸ್ಸಿನಲ್ಲಿ ಸೇರಿಸಿ ಬಿಡುವುದೆ ಒಳಿತೆಂದು, ಮುಂದಾಳುಗಳಿಗೆ ತೋರಿದುದರಿಂದ ಮಹಾತ್ಮರು ಆ ವಿಷಯವನ್ನು ಚರ್ಚಿಸಲು ಡಾ. ಹರಡೀಕರರನ್ನು ಕರೆಯಿಸಿದರು.

'ಸೇವಾದಲವು ರಾಷ್ಟ್ರೀಯ ಸಭೆಯ ಸೈನ್ಯವಿಭಾಗವೆಂದು ತಿಳಿಯಲಾಗುವುದಾದರೂ ನಿಜವಾಗಿ ಸರಕಾರೀ ಸೈನ್ಯಕ್ಕೂ ಇದಕ್ಕೂ ಬಹಳ ಹೆಚ್ಚು ಕಡಿಮೆ ಇದೆ. ಸರಕಾರದ ದಂಡು ನಿರ್ಜೀವವಾದ ಒಂದು ಯಂತ್ರ. ಆ ಯಂತ್ರಕ್ಕೆ ವಿಚಾರ-ವಿವೇಕಗಳಿಲ್ಲ. ಆದರೆ ಸೇವಾದಲದ ಸೈನಿಕರು ಹೀಗಲ್ಲ. ಇವರು ರಾಷ್ಟ್ರೀಯ ಸಭೆಯಲ್ಲಿ ಹೊಟ್ಟೆಗಾಗಿ ಸೇರಿದವರೂ ಅಲ್ಲ; ತಮ್ಮ ದೇಶೋದ್ಧಾರದ ಉತ್ತಮ ವಿಚಾರ-ಉತ್ಸಾಹಗಳ ಪ್ರೇರಣೆಯಿಂದ, ಕಷ್ಟ ನಷ್ಟಗಳನ್ನು ಸಹಿಸಲು ಸಿದ್ಧರಾಗಿ ಮುಂದೆ ಬಂದ ಬಲ್ಲಾಳುಗಳು. ಪ್ರತಿಯೊಬ್ಬರೂ ವ್ಯಕ್ತಿತ್ವ, ವಿಚಾರ-ವಿಮರ್ಶಕ ಶಕ್ತಿಯುಳ್ಳವರು; ನಿರ್ಧಾರ, ನಿಷ್ಠೆಗಳ ಬೆಂಬಲ ಉಳ್ಳವರು. ಇಂತಹ ಒಂದು ನಿಶ್ಚಿತವಾದ ನಿಷ್ಠೆ, ಶ್ರದ್ಧೆ ಇದ್ದವರು ತಮ್ಮ ಬುದ್ಧಿಗೆ ಸರಿಹೋಗದವರ ಕೈಯಲ್ಲಿ ಕೆಲಸ ಮಾಡಲು ಸಿದ್ಧರಾಗುವರೆಂದೆಣಿಸುವುದು ಸರಿಯಲ್ಲ. ಡಾಕ್ಟರರು ತಮ್ಮ ಅವಿಶ್ರಾಂತಶ್ರಮ, ಕಾರ್ಯನಿಷ್ಠೆಯಿಂದ ಸೇವಾದಲದ ಮಹತ್ವವನ್ನು ಕೆಲದಿನಗಳಲ್ಲಿಯೇ ಅಖಿಲ ಭಾರತ ವರ್ಷಕ್ಕೆ ಮನಗಾಣಿಸಿಕೊಟ್ಟರು. ಸೇವಾದಲವು ಮಾಡಿದ ರಾಷ್ಟ್ರ ಸೇವೆಯ ಮಹತ್ವವನ್ನು ಯಾರೂ ಬಣ್ಣಿಸುವ ಕಾರಣವಿರಲಿಲ್ಲ. ಡಾಕ್ಟರರ ಈ ಕಾರ್ಯದ ಬೆಳವಣಿಗೆಯು ಅವರಿಗೆ ಒಳಗೂ ಹೊರಗೂ ಹಗೆಗಳನ್ನುಂಟು ಮಾಡಿತು. ಆಳರಸರು ಹರಡೀಕರರನ್ನು ಕಡೆಗಣ್ಣಿನಿಂದ ನೋಡುತಿದ್ದುದು ಸೋಜಿಗವಲ್ಲ. ಆದರೆ ಪ್ರಸಿದ್ಧ ದೇಶಭಕ್ತರೆನಿಸುವ ಎಷ್ಟೋ ಮಹಾಶಯರು ಹಿತಶತೃಗಳಾದರು. ಹರಡೀಕರರು ದಿನ ದಿನಕ್ಕೂ ಲೋಕಪ್ರಿಯರಾಗುತಿದ್ದುದನ್ನು ಈ ಹಿತಶತ್ರುಗಳು ಸಹಿಸದಾದರು. ಇವರು ಮಹಾತ್ಮರಿಗೂ, ಶೇಠ್ ಜಮನಾಲಾಲ ಮೊದಲಾದ ಅವರ ಅನುಯಾಯಿಗಳಿಗೂ ಡಾಕ್ಟರರ ಬಗ್ಗೆ ಇಲ್ಲದ-ಸಲ್ಲದ ಸಂಗತಿಗಳನ್ನು ಹೇಳಲೂ ಹಿಂಜರಿಯಲಿಲ್ಲ. ಅಧಿಕಾರಿವರ್ಗವಂತೂ ಈ ಸಂಸ್ಥೆಯನ್ನು ಮುರಿಬಡಿಯಲಿಕ್ಕೆ ಸಮಯವನ್ನೇ ನೋಡುತಿದ್ದಿತು. ಹೀಗೆ ಇಬ್ಬಗೆಯ ಕುತ್ತು ಬಂದೊದಗಿತು. ಸೇವಾದಲವನ್ನು ರಾಷ್ಟ್ರೀಯ ಸಭೆಗೆ ಸೇರಿಸಲು ಮಹಾತ್ಮರು ಅಪ್ಪಣೆಕೊಟ್ಟರು. ಮಹಾತ್ಮರ ಮಾತನ್ನು ಮುರಿದು, ಹೊರಗೆ ನಿಂತು ಕಾಂಗ್ರೆಸ್ಸಿನ ಕೆಲಸ ಮಾಡುವು

ದಂತು ಅಸಾಧ್ಯವಾಗಿತ್ತು. ಹಿಂದುಸ್ಥಾನದ ಸ್ವಾತಂತ್ರ್ಯಕ್ಕಾಗಿ ಬೇಕಾದ, ಸ್ವಾರ್ಥತ್ಯಾಗವನ್ನು ಮಾಡಿ ಹೋರಾಡುವುದೇ ಸೇವಾದಲದ ಮುಖ್ಯ ಗುರಿ. ವ್ಯಕ್ತಿ ವೈಶಿಷ್ಟ್ಯವು ನಷ್ಟವಾಗುವುದಾದರೂ ಮುಖ್ಯಧ್ಯೇಯವು ಸಾಧಿಸುವುದೆಂದು, ಪಂ. ಜವಾಹರಲಾಲರು ತಮಗೆ ಮಾಡಿದ ತ್ರಿಕರಣ ಪೂರ್ವಕ ಸಹಾಯವನ್ನು ಸ್ಮರಿಸಿ, ಡಾಕ್ಟರರು ಅವರಲ್ಲಿಯೂ ವಿಚಾರ ವಿನಿಮಯವನ್ನು ಮಾಡಿ,ಸೇವಾದಲವನ್ನು " ಸರ್ವನಾಶೇ ಸಮುತ್ಪನ್ನೆ ಅರ್ಧಂ ತ್ಯಜತಿ ಪಂಡಿತಃ " ಎಂಬಂತೆ ಕಾಂಗ್ರೆಸ್ಸಿಗೆ ಒಪ್ಪಿಸಲು ಒಪ್ಪಿಗೆ ಯನ್ನಿತ್ತರು. ' ಮಹಾತ್ಮರಾದರೂ ಸೇವಾದಲದ ಅಖಿಲ ಭಾರತೀಯ ಮಂಡಲದ ಸಮ್ಮತಿಯನ್ನು ಪಡೆದು, ರಾಷ್ಟ್ರೀಯ ಸಭೆಯ ವರ್ಕಿಂಗ್ ಕಮಿಟಿಯ ಗೊತ್ತುವಳಿಯ ಮೇರೆಗೆ ಸೇವಾದಲವನ್ನು ರಾಷ್ಟ್ರೀಯ ಸಭೆಯ ಸ್ವಯಂಸೇವಕ ವಿಭಾಗವನ್ನಾಗಿ ಮಾಡಿಕೊಂಡರು.

' ತನ್ನ ನಿಸ್ಸೀಮ ರಾಷ್ಟ್ರ ಸೇವೆಯಿಂದ ಅಖಿಲ ಭಾರತ ವರ್ಷದ ಮಹತ್ವವನ್ನು ಪಡೆದು, ರಾಷ್ಟ್ರೀಯ ಸಭೆಯ ಒಂದು ಮಹತ್ವದ ಅಂಗವಾದ ಭಾಗ್ಯವು ದೊರೆತ ಹಿಂದುಸ್ಥಾನೀ ಸೇವಾದಲವು ಹುಟ್ಟಿದ್ದು ಕರ್ನಾಟಕದಲ್ಲಿ. ಅದನ್ನು ಆರಂಭಿಸಿ ಅಭಿವೃದ್ಧಿಗೆ ಬರಲು ಎಲ್ಲ ರೀತಿ ಯಿಂದಲೂ ಕಾರಣರಾದ ಡಾ. ಹರಡೀಕರರು ಕನ್ನಡಿಗರು. ಅದಕ್ಕಾ ಗಿಯೇ ಮ. ಗಾಂಧಿಯವರು ಹಿಂ. ಸೇ. ದಲವನ್ನು ರಾಷ್ಟ್ರೀಯ ಸಭೆ ಯಲ್ಲಿ ಒಂದುಗೂಡಿಸಿಕೊಂಡು ಅದರ ಚಾಲಕವರ್ಗ, ಅಧಿಕಾರಿವರ್ಗ ವನ್ನು ಪೂರೈಸುವ **ಹೊಣೆಯನ್ನು ಕರ್ನಾಟಕಕ್ಕೆ ಒಪ್ಪಿಸಿದರು.** ಹಿಂದುಸ್ಥಾನದ ಯಾವದೇ ಪ್ರಾಂತದ ಸ್ವಯಂಸೇವಕ ಪಥಕವೇ ಆಗಲಿ ಅದರ ಮುಖ್ಯಾಧಿಕಾರಿಯು ಸೇವಾದಲದ ಶಿಕ್ಷಣ ಪಡೆದು ಯೋಗ್ಯತಾ ಪತ್ರವನ್ನು ಸಂಪಾದಿಸಲೇಬೇಕೆಂದು ಗೊತ್ತಾಯಿತು. ಈ ಶಿಕ್ಷಣವನ್ನು ಕೊಡುವುದಕ್ಕಾಗಿ ಕರ್ನಾಟಕದಲ್ಲಿ (ಬಾಗಲಕೋಟೆ) ಶಾಲೆಯನ್ನು ತೆರ ಯಲಿಕ್ಕೆ ಡಾ. ಹರಡೀಕರರಿಗೆ ಅಪ್ಪಣೆಯಾಯಿತು. '

' ಕದಂಬ, ಚಾಲುಕ್ಯ, ರಾಷ್ಟ್ರಕೂಟ, ವಿಜಯನಗರಗಳ ಆಳಿಗಾಲ ವಾದ ಬಳಿಕ ಕಳೆದ ೩೦೦–೪೦೦ ವರ್ಷಗಳಲ್ಲಿ ಇಂತಹ ಮಹತ್ವದ ಸಂಧಿಯು ಕರ್ನಾಟಕಕ್ಕೆ ಬಂದಿರಲಿಲ್ಲ. ದಲದ ಶಿಕ್ಷಣಾಲಯವನ್ನು

ಬಾಗಲಕೋಟೆಯಲ್ಲಿ ತೆರೆಯುವುದರಲ್ಲಿ ಒಂದು ಬಗೆಯ ಔಚಿತ್ಯವೂ ಇತ್ತೆಂದು ಹೇಳಬಹುದು. ಉತ್ತರ ಹಿಂದುಸ್ತಾನವನ್ನು ಸುಲಿಗಲು ಹುಮ್ಮಸ್ಸಿನಿಂದ ಬಂದ,ಮಹಾಪರಾಕ್ರಮಶಾಲಿಯಾದ **ಹರ್ಷವರ್ಧನ** ನನ್ನು ಸರ್ವದೆಯಿಂದ ಹಿಮ್ಮೆಟ್ಟಿಸಿದ ಮಹಾವೀರಾಧಿವೀರನಾದ **ಪುಲಿ ಕೇಶಿಯು** ಬಾದಾಮಿಯವನು. ಅವನ ಗಂಡುಗಲಿಗಳಾದ ಸೈನಿಕರು ಅರ್ಥಾತ್ ಬಾದಾಮಿಯ ಸುತ್ತು ಮುತ್ತಲಿನವರೇ ಇರಬೇಕು. ಇಂತಹ ಪರಾಕ್ರಮಿಗಳಾದ ಬಲ್ಲಾಳುಗಳಿಗೆ ಜನ್ಮಕೊಟ್ಟ ಆ ಪ್ರದೇಶವು ಸೇವಾ ದಲದ ನಾಯಕರನ್ನೂ ದಳವಾಯಿಗಳನ್ನೂ ಸಿದ್ಧಮಾಡುವುದಕ್ಕೆ ತಕ್ಕುದೇ ಆಯಿತು. ಇಷ್ಟು ದಿನಗಳ ವರೆಗೆ ಎಲ್ಲಿಯೂ ಅವಕಾಶವು ದೊರೆಯದಿದ್ದುದಕ್ಕೆ ಚಡಪಡಿಸುತ್ತಿದ್ದ ಕನ್ನಡಿಗರ ಪರಾಕ್ರಮ, ಶಕ್ತಿ, ಸಾಹಸಗಳಿಗೆ ಇನ್ನು ಬಾಗಿಲು ತೆರೆದಂತಾಯಿತು. ಮಹಾತ್ಮರು ಬಯಸುವಂತೆ ಶಿಕ್ಷಣ ಪಡೆದ ಸತ್ವಸಿಷ್ಠರೂ ತೇಜಸ್ವಿಗಳೂ ಆದ ತರುಣ ರನ್ನು ಸಿದ್ಧಗೊಳಿಸಲು ಕರ್ನಾಟಕದಲ್ಲೆಲ್ಲ ಕೆಲಸವು ಆರಂಭವಾಯಿತು.' ಸೇವಾದಲದ ವ್ಯಾಯಾಮ ಪೀಠವು **ಸೇವಾದಲದ ಶಿಕ್ಷಣ ಪೀಠ** ವಾಯಿತು.

## ಸ್ತ್ರೀಯರಲ್ಲಿ ಸಂಘಟನೆ

೧೯೨೭ರಿಂದ ಸೇವಾದಲದಲ್ಲಿ ಸ್ತ್ರೀಯರದೊಂದು ವಿಭಾಗವನ್ನೇ ಏರ್ಪಡಿಸಬೇಕೆಂದು ಡಾಕ್ಟರರ ಇಚ್ಛೆ. ಆದರೆ ಸೇವಾದಲದ ಮಧ್ಯ ವರ್ತಿ ಮಂಡಲದವರು ಇದಕ್ಕೆ ಬೆಂಬಲವನ್ನೀಯದುದರಿಂದ ಅದು ಹಾಗೆಯೇ ಮುಂದೆ ಬೀಳುತ್ತ ನಡೆದಿತ್ತು. ಮುಂದೆ ೧೯೨೯ರಲ್ಲಿ ಲಾಹೋರ ಕಾಂಗ್ರೆಸ್ಸಿನಲ್ಲಿ ಅವರಿಗೆ ಈ ಕಾರ್ಯಕ್ಕೆ ಯಶದೊರೆಯಿತು. ಅಲ್ಲಿ ಸೇವಾದಲದ ಮಧ್ಯವರ್ತಿ ಮಂಡಲದಲ್ಲಿರುವ ಸ್ತ್ರೀಯರು ತಮ್ಮದೊಂದು ಸ್ವತಂತ್ರ ಮಂಡಲವನ್ನೇರ್ಪಡಿಸಿಕೊಂಡು, ಹಿಂದುಸ್ಥಾನದ ಸ್ತ್ರೀಯರಿಗೆ ಶಿಕ್ಷಣಕೊಟ್ಟು, ಅವರಲ್ಲಿ ಸಂಘಟನೆಯನ್ನುಂಟು ಮಾಡಬೇಕೆಂದು ಗೊತ್ತು ಮಾಡಲಾಯಿತು. ೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹದ ಕಾಲಕ್ಕೆ

ಮುಂಬಯಿಯ ಕೆಲವು ತರುಣಿಯರು **ಸೇವಿಕಾದಲದ ಸಂಸ್ಥೆ**ಯಲ್ಲಿ ಸೇರಿ ಶಿಕ್ಷಣಹೊಂದಿ, ಸತ್ಯಾಗ್ರಹದಲ್ಲಿ ಕಾದಿ, ಕಾರಾಗ್ರಹ ಸೇರಿದರು.

ಸೇವಾದಲವು ಕಾಂಗ್ರೆಸ್ಸಿನ ವಶಕ್ಕೆ ಹೋದ ಕೂಡಲೇ ಅದರ ಮುಖ್ಯಾಧಿಕಾರಿಯ ಸ್ಥಾನದಲ್ಲಿ ಪಂ. ಜವಾಹರಲಾಲರನ್ನೂ, ಸಂಘಟಕ ಕಾರ್ಯದರ್ಶಿಯ ಸ್ಥಾನದಲ್ಲಿ ಡಾ. ಹರ್ಡಿಕರರನ್ನೂ ಕಾಂಗ್ರೆಸ್ಸಿನವರು ನಿಯಮಿಸಿದರು. ಇವರಿಬ್ಬರೂ ಕೂಡಿ ಸ್ತ್ರೀಯರ ಶಾಖೆಯನ್ನು ಬಲಪಡಿಸಲು ಯತ್ನಿಸಿದರು. ಸೇವಾದಲದ ಮಧ್ಯವರ್ತಿ ಮಂಡಲದ ವತಿಯಿಂದ **ಮಂಗಳೂರಿನ ಕನ್ನಡಿತಿಯರಾದ ಸೌ. ಕಮಲಾದೇವಿ ಚಟ್ಟೋಪಾಧ್ಯಾಯ**ರನ್ನು ಸ್ತ್ರೀಯರ ಸಂಘಟಕ ಕಾರ್ಯದರ್ಶಿಗಳನ್ನಾಗಿಯೂ, ಮುಂಬಯಿಯ **ಕು. ಸಫಿಯಾ ಸೋಮಜಿ**ಯವರನ್ನು ಕಮಲಾದೇವಿಯವರ ಸಹಾಯಕರನ್ನಾಗಿಯೂ, ಹುಬ್ಬಳ್ಳಿಯ **ಶ್ರೀಮತಿ ಉಮಾಬಾಯಿ ಕುಂದಾಪುರ**ರನ್ನು ಕಚೇರಿಯ ಕಾರ್ಯದರ್ಶಿಗಳನ್ನಾಗಿಯೂ ನಿಯಮಿಸಿದರು. ರಾಷ್ಟ್ರಸಭೆಯ ವರ್ಕಿಂಗ್ ಕಮಿಟಿಯವರು ಇದಕ್ಕೆ ಸಮ್ಮತಿಯನ್ನಿತ್ತರು. ಶ್ರೀಮತಿ ಕಮಲಾದೇವಿ, ಸಫಿಯಾ ಸೋಮಜಿ ಹಾಗು ಡಾ. ಹರಡೀಕರರು ಕೂಡಿ ಇಡೀ ಹಿಂದುಸ್ಥಾನವನ್ನು ಸಂಚರಿಸಿ, ಸ್ತ್ರೀಯರಲ್ಲಿ ಆಗಬೇಕಾದ ಸಂಘಟನೆಯ ಅವಶ್ಯಕತೆಯನ್ನು ಜನರಿಗೆ ತಿಳುಹಿಸಿ ಹೇಳಲು ಯತ್ನಿಸಿದರು. ಈ ಪ್ರವಾಸದ ಫಲದಿಂದಲೇ ವಿವಿಧ ಪ್ರಾಂತಗಳಿಂದ ಸ್ತ್ರೀಯರನ್ನು ಮುಂಬಯಿಗೆ ಕರೆಯಿಸಿಕೊಂಡು ಅವರಿಗಾಗಿ **ಮಾತುಂಗಾ**ದಲ್ಲಿ ಒಂದು ಶಿಕ್ಷಣ ಶಿಬಿರವನ್ನು ಪ್ರಾರಂಭಿಸಿ ಶಿಕ್ಷಣಕೊಟ್ಟರು.

ಹೀಗೆ ಸೇವಾದಲವು ೧೯೨೩ರಲ್ಲಿ ಹುಟ್ಟಿ ೧೯೩೧ರ ಅಗಸ್ಟದ ವರೆಗೆ ಸುಮಾರು ೮ ವರ್ಷ ಅವ್ಯಾಹತವಾಗಿ ದೇಶದ ಏಳಿಗೆಗಾಗಿ ದುಡಿಯಿತು. ಕಾಂಗ್ರೆಸ್ಸಿನ ೨೧ ಪ್ರಾಂತಗಳೊಳಗಿನ ೧೫ ಪ್ರಾಂತಗಳಲ್ಲಿ ದಲದ ಶಾಖೆಗಳು ಸ್ಥಾಪಿತವಾದುವು. ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಔದ್ಯೋಗಿಕ, ಧಾರ್ಮಿಕ ಮೊದಲಾದ ಎಲ್ಲ ರೀತಿಗಳಿಂದ ಭಾರತದ ಉದ್ಧಾರಕ್ಕಾಗಿ ಹೆಣಗಿತು.

ಈ ಮೇರೆಗೆ ಕಾರ್ಯಮಾಡಿ ಕೊನೆಗೆ ೧೯೩೧ನೆಯ ಅಗಸ್ಟದಲ್ಲಿ

ಕಾಂಗ್ರೆಸ್ಸಿನ ಒಂದಂಗವಾಗಿರಲು, ೧೯೩೨ನೆಯ ಸತ್ಯಾಗ್ರಹ ಯುದ್ಧದಲ್ಲಿ ಇದನ್ನು **ಕಟ್ಟುಳಿಗೆಟ್ಟ ಸಂಸ್ಥೆ**ಯೆಂದು ಸರಕಾರವು ಸಾರಿತು. ಕಾಂಗ್ರೆಸ್ಸಿನ ಮೇಲಿನ ಕಟ್ಟು ಈಗ ಹೋಗಿದ್ದರೂ ಸೇವಾದಲದ ಕಟ್ಟು ಹಾಗೆಯೇ ಇದೆ.

ಕರ್ನಾಟಕ ಪ್ರಾಂತದ ಕಡೆಗೆ ಇಡೀ ಹಿಂದುಸ್ಥಾನದ ಜನರ ಲಕ್ಷ್ಯವನ್ನೆಳೆದು ಕನ್ನಡನಾಡಿನ ಏಳ್ಗೆಯನ್ನು ಮಾಡಿದವರಲ್ಲಿ ಹರಡೀಕರರು ಅಗ್ರಗಣ್ಯರೆಂದು ಹೇಳಬಹುದು. ಪ್ರತಿ ತಿಂಗಳ ಕೊನೆಯ ರವಿವಾರ ಬೆಳಗಿನ ೮ ಗಂಟೆಗೆ ಹಿಂದುಸ್ಥಾನದ ಮೂರು ಒಣ್ಣದ ರಾಷ್ಟ್ರಧ್ವಜವನ್ನು ಹಾರಿಸುವ ಸಮಾರಂಭವು ಎಲ್ಲ ಕಡೆಗೆ ನಡೆಯಬೇಕೆಂದು ಸೇವಾದಲವು ಗೊತ್ತು ಮಾಡಿತು. ಇದಕ್ಕೆ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಬೆಂಬಲವನ್ನಿತ್ತಿತು. ದೇಶದ ಎಲ್ಲ ಭಾಗಗಳಲ್ಲಿ ಈ ಗೊತ್ತುವಳಿಯು ಕಾರ್ಯರೂಪದಲ್ಲಿ ಬರುವಂತೆ ಮಾಡುವ ಕೆಲಸವನ್ನು ಸೇವಾದಲವೇ ಕೈಕೊಂಡಿತು. ಎಲ್ಲ ವರ್ತಮಾನ ಪತ್ರಗಳಲ್ಲಿ ಪ್ರತಿ ತಿಂಗಳು ಧ್ವಜಾರೋಹಣ ಸಮಾರಂಭವ ನಡೆಯಿಸಿ ಸುದ್ದಿಗಳನ್ನು ಕಳಿಸುತ್ತಿದ್ದರು. ಬರಬರುತ್ತ ಸೇವಾದಲವು ಇಡೀ ಹಿಂದುಸ್ಥಾನವನ್ನು ವ್ಯಾಪಿಸಿತು. ಎಲ್ಲ ಕಡೆಯ ಜನರು ಈ ಸಂಬಂಧದಿಂದ ಕರ್ನಾಟಕದೊಡನೆ ಪತ್ರವ್ಯವಹಾರ ಮಾಡಬೇಕಾಯಿತು. ಶಿಕ್ಷಣ ಪಡೆಯಲು ಕರ್ನಾಟಕಕ್ಕೆ ಬರಬೇಕಾಯಿತು. ಈ ವರೆಗೂ ಸೇವಾದಲದ ವಿದ್ಯಾಪೀಠವು **ಬಾಗಿಲಕೋಟೆ**ಯಲ್ಲಿ, ಸೇವಾದಲದ ಮುಖ್ಯ ಕಚೇರಿಯು **ಹುಬ್ಬಳ್ಳಿ**ಯಲ್ಲಿದ್ದುದರಿಂದ ಕರ್ನಾಟಕ ಪ್ರಾಂತವು ಭರತಖಂಡದ ಎಲ್ಲ ಜನರ ಕಣ್ಣ ಮುಂದೆ ಕಟ್ಟಿದಂತಾಯಿತು.

## ಪರಿಷತ್ತುಗಳ ಅಧ್ಯಕ್ಷರು.

ಕೇವಲ ತರುಣರ ಸಂಘಟನ ಕಾರ್ಯದಲ್ಲಿ ನುರಿತವರಾದ ಹರಡೀಕರರನ್ನು ಆ ವಿಷಯದ ಕಾರ್ಯಗಳಿಗಾಗಿಯೇ ಕರೆಯುತ್ತಾರೆ. ಅಂತಹ ವಿಷಯಗಳ ಸಂಬಂಧವಾಗಿ ಸಲಹೆಗಳನ್ನು ಕೇಳುತ್ತಾರೆ. ಆ

ಸಂಬಂಧವಾದ ಪರಿಷತ್ತುಗಳಿಗೆ ಅಧ್ಯಕ್ಷರನ್ನಾಗಿ ಆರಿಸುತ್ತಾರೆ. ೧೯೨೩ ರಲ್ಲಿ **ಬಿಹಾರ ಸ್ವಯಂಸೇವಕ** ಪರಿಷತ್ತಿಗೆ, ೧೯೨೮ರಲ್ಲಿ **ವರಾಡ ಆಂಧ್ರ ಪ್ರಾಂತದ** ಸ್ವಯಂ ಸೇವಕ ಪರಿಷತ್ತುಗಳಿಗೆ ಡಾಕ್ಟರರು ಅಧ್ಯಕ್ಷರಾಗಿದ್ದರು.

ಸೇವಾದಲವು ಕಾಂಗ್ರೆಸ್ಸಿನ ಅಧೀನತೆಗೊಳಪಟ್ಟ ಸಂಸ್ಥೆಯಾಗಿದ್ದರೂ ಅದರ ಕಾರ್ಯಕ್ಷೇತ್ರವು, ಪ್ರಾಮುಖ್ಯವಾಗಿ ಸ್ವಯಂ ಸೇವಕರಿಗೆ ಶಿಕ್ಷಣ ಕೊಡುವುದಾಗಿತ್ತು. ಆದರೂ ಕಾಂಗ್ರೆಸ್ಸಿನವರು ಗೊತ್ತುಮಾಡಿದ ಎಲ್ಲ ಕಾರ್ಯಕ್ರಮಗಳಲ್ಲಿ ಸೇವಾದಲವು ಭಾಗ ತೆಗೆದುಕೊಳ್ಳುತಿತ್ತು. ಇದಲ್ಲದೆ ಡಾಕ್ಟರರು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಔದ್ಯೋಗಿಕ ಮೊದಲಾದ ಎಲ್ಲ ಕಾರ್ಯಕ್ಷೇತ್ರಗಳಲ್ಲಿ ವೈಯುಕ್ತಿಕವಾಗಿ ಹಾಗು ಸೇವಾದಲದ ಮೂಲಕವಾಗಿ ಸಹಾಯ ಮಾಡುತ್ತಿದ್ದರು. ಖಾದೀ ಪ್ರಸಾರ, ಸ್ವದೇಶಿ ಪ್ರಸಾರಕ್ಕಾಗಿಯೂ ಸಹಾಯ ಮಾಡಿದರು. ಅಮೇರಿಕೆಯಿಂದ ಹಿಂದುಸ್ಥಾನಕ್ಕೆ ಬಂದಂದಿನಿಂದ ಪ್ರತಿವರ್ಷ ಕಾಂಗ್ರೆಸ್ಸಿನ ಅಧಿವೇಶನಕ್ಕೆ ಹರಡೀಕರರು ತಪ್ಪದೆ ಹೋಗುತಿದ್ದಾರೆ. ೧೯೨೧ರಿಂದ ಕ. ಪ್ರಾ. ಕಾಂ. ಕಮಿಟಿ, ಅಖಿಲ ಭಾರತ ಕಾ. ಕಮೀಟಿಗಳ ಸಭಾಸದರಾಗಿ ಕೆಲಸ ಮಾಡುತ್ತ ಬಂದಿದ್ದಾರೆ. ಕರ್ನಾಟಕದೊಳಗಿನ ಎಲ್ಲ ರಾಜಕೀಯ ಪರಿಷತ್ತುಗಳಲ್ಲಿ ಇವರು ಇದ್ದೇ ಇರುತ್ತಾರೆ.

ಈ ರೀತಿಯಾಗಿ ಮೊದಲಿನಿಂದಲೂ ಕೊನೆಯ ವರೆಗೆ ಸೇವಾದಲದ ಸಾಮಾನ್ಯ ಕಾರ್ಯದರ್ಶಿಗಳಾಗಿ ಕೆಲಸ ಮಾಡಿ, ಕನ್ನಡ ನಾಡಿನ ಏಳ್ಗೆ ಮಾಡಿದುದಲ್ಲದೆ ಇಡೀ ಹಿಂದುಸ್ತಾನದ ಹಿತವನ್ನು ಸಾಧಿಸುತ್ತಲೇ ಭಾರತದ ಮುಂದಾಳುಗಳ ಮಾಲೆಯಲ್ಲಿ ಸೇರಿದರು.

# ಬಡತನದ ಬಾಳು

ಲೇಸಿನ್‌ನ ತತ್ವಜ್ಞಾನಕ್ಕೆ, ಹಿಟ್ಲರನ ಹಿರಿತನಕ್ಕೆ, ವಿವೇಕಾನಂದರ **ದರಿದ್ರನಾರಾಯಣನಿಗೆ** ಬಡತನವೇ ಮೂಲ. ಬಲಾಢ್ಯರಾಷ್ಟ್ರವನ್ನೆ ದುರಿಸಲು ತರುಣರನ್ನು ಸಜ್ಜುಗೊಳಿಸುವದು ಬಡತನ. ಬಂದುದು ಬರಲಿ ದೇವರ ದಯವೊಂದಿರಲೆಂದು ದೇಶಕ್ಕಾಗಿ ಜೀವದ ಹಂಗು ದೊರೆಸುವದು ಬಡತನ. ಹಗೆತನವನುಳಿದು ದಯವೆಲ್ಲ ಬೆಳೆದು, ತನ್ನಂತೆ ಪರರ ಬಗೆಯಿ ಸುವುದು ಬಡತನ. ಮೆಚ್ಚಿಗೆ–ನೆಚ್ಚಿಗೆ, ಸಾಹಸಕ್ಕೆ – ಸಾದಾಜೀವನಕ್ಕೆ, ಆದಿ ಭೌತಿಕ, ಆಧ್ಯಾತ್ಮಿಕ ಸಂಪತ್ತಿಗೆ ತಾಯಿ ಬಡತನ. ಆಶೆಗೆ ನಿರಾಶೆಯು ಮೂಲವಿದ್ದಂತೆ ಸಿರಿತನಕ್ಕೆ ಬಡತನವಿದೆ.

ಬಡತನದ ಬಾಳು ಭಾರತೀಯರನ್ನು ಬಡಿದೆಬ್ಬಿಸಿದೆ. ಗಂಡು–ಹೆಣ್ಣು, ಕೂಸು–ಕುನ್ನಿಗಳೆಲ್ಲ ಹಿಂದೆ ಮುಂದೆ ನೋಡದೆ ಗಾಂಧಿಯವರನ್ನು ಹಿಂಬಾಲಿಸುತ್ತಿರುವದು ಬಡತನಕ್ಕಾಗಿಯೇ.

ಕಡುಬಡತನದಲ್ಲಿ ಬಾಲ್ಯವನ್ನು ಕಳೆದ ಜನರೆಲ್ಲ ಒಂದಿಲ್ಲೊಂದು ರೀತಿಯಿಂದ ಮುಂದೆ ಬಂದಿರುವರು. ಹಲವರು ರಾಜಕಾರಣದಲ್ಲಿ ಮುಂದರಿದಿದ್ದರೆ, ಕೆಲವರು ತತ್ವಜ್ಞಾನದಲ್ಲಿ. ನಾಡಿಗಾಗಿ ಮಡಿದರು ಹಲವರು. ದೇಶಕ್ಕಾಗಿ ವಿರಾಸಲಾದರು ಕೆಲವರು. ಸೈನಿಕರಾಗಿ ಸತ್ತರು, ಸೇನಾಪತಿಗಳಾಗಿ ಗೆದ್ದರು.

**ಬಡತನದ ಜೀವನವೇ ಡಾಕ್ಟರರನ್ನು ಇಲ್ಲಿಗೆ ಮುಟ್ಟಿಸಿದೆ** ಎಂದು ಹೇಳಬಹುದು. ಅಚ್ಚುಕಟ್ಟುತನ, ಸಹನಶೀಲತೆ, ಕಷ್ಟ ಸಹಿಷ್ಣುತೆ, ಅಲ್ಪತೃಪ್ತಿಗೆಲ್ಲ ಇವರು ಬಡವರಾಗಿ ಬೆಳದುದೇ ಕಾರಣ ವೆನ್ನಬಹುದು.

ಹರಡೀಕರರ ತಂದೆಯವರು ೫೦ ರೂಪಾಯಿ ಸಂಬಳದವರು. ಹೊಲದ ಉತ್ಪನ್ನ ೫೦ ರೂಪಾಯಿ. ಮನೆತುಂಬ ಮಕ್ಕಳು. ಇಂತಿರುವಾಗ ಹಬ್ಬ-ಹುಣ್ಣಿವೆಗಳಲ್ಲಿ ಹೊಸ ಅರಿವೆ ತಿಂಡಿತಿನಸುಗಳಿಂದ ಹುಡುಗರನ್ನು ಸಮಾಧಾನವಾಗಿಡುವದು ಬಹು ಕಷ್ಟವಾಗಿತ್ತು. ಆ ಹುಡುಗತನದ ಜಗಳ, ಆ ತಾಯಿತಂದೆಗಳ ರಮಿಸೋಣ, ಆ ಬಡತನದ ಭೀಕರ ಚಿತ್ರವು ಕಣ್ಣೆದುರಿಗೆ ಬಂದರೆ ಡಾಕ್ಟರರು ಈಗಲೂ ನಡುಗುತ್ತಾರೆ.

ತಂದೆ ತೀರಿದ ಬಳಿಕ, ಒಬ್ಬಿಬ್ಬ ಅಣ್ಣಂದಿರು ಗತಿಸಿದನಂತರ ಒಬ್ಬ ಅಣ್ಣನ ೯–೧೦ ರೂಪಾಯಿ ಸಂಬಳದಲ್ಲಿ, ಅದೂ ಪುಣೆಪಟ್ಟಣದಲ್ಲಿ ಮನೆ ಜನರೆಲ್ಲ ಹೇಗೆ ಕಾಲಕಳೆದಿರಬಹುದೆಂಬುದನ್ನು ಕಲ್ಪಿಸಲು ಓದುಗರಿಗೆ ಬಿಡುವುದೊಳಿತು. ಅಡಿಗೆ ಮಾಡಬೇಕೆಂದರೆ ಸಾಕಷ್ಟು ಪಾತ್ರೆಗಳಿಲ್ಲ; ಉಣಬೇಕೆಂದರೆ ಕಾಳು-ಕಡಿಗಳಿಲ್ಲ. ತೊಡಬೇಕೆಂದರೆ ಬಟ್ಟೆ-ಬರೆಗಳಿಲ್ಲ. ಇದ್ದುದರಲ್ಲಿಯೇ ಅರಹೊಟ್ಟೆ ಉಂಡು, ನಡುಗುತ್ತ ಮಲಗಿ ದಿನಗಳೆದವರವರು.

೧೯೦೪ರಲ್ಲಿ ಹರಡೀಕರರು ಪುಣೆಯಿಂದ ಹುಬ್ಬಳ್ಳಿಗೆ ಬಂದರು. ಒಬ್ಬನೂಟ ಉಳಿಯಿತೆಂದು ಮನೆಯವರಿಗೂ ಸುದುಃಖ ಸಮಾಧಾನವಾಯಿತು. ಹುಬ್ಬಳ್ಳಿಯಲ್ಲಿ ಮೆಟ್ರಿಕ್ ಶಿಕ್ಷಣ ಮುಗಿಸಿ ಕಲಕತ್ತೆಗೆ ಹೊರಟಾಗ ೮–೧೦ ರೂಪಾಯಿಗಳಿದ್ದವು ಅವರ ಹತ್ತರ. ಕಲಕತ್ತೆಗೆ ಬಂದೊಡನೆ ಮಹಾರಾಷ್ಟ್ರಮಂಡಲದವರು ಬೇರೆ ಬೇರೆ ಜನರ ವೆಚ್ಚದಿಂದ ದಿನಾಲು ಎರಡು ಊಟ ದೊರೆಯುವಂತೆ ವಾರ ಹಚ್ಚಿಕೊಟ್ಟರು. ಅಮರಾವತಿಯ ಖಾಪರ್ಡೆ ದಾದಾಸಾಹೇಬರ ಮಗ ಬಾಳಾಸಾಹೇಬರು ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದರು. ಇವರು ಹರಡೀಕರರು ಇರುವ-ಊಟದ ವ್ಯವಸ್ಥೆಯಲ್ಲಿ ಬಹಳ ಸಹಾಯ ಮಾಡಿದರು.

## ಕರ್ನಾಟಕ ಸಂಘ ಸ್ಥಾಪನೆ.

ಇಷ್ಟರಲ್ಲಿ ಕೆಲವು ಕನ್ನಡ ವಿದ್ಯಾರ್ಥಿಗಳು ಕಲಕತ್ತೆಗೆ ಬಂದರು. ಡಾಕ್ಟರರು ಅವರೊಂದಿಗೆ ಸೇರಿ '**ಕರ್ನಾಟಕ ಮಂಡಲ**' ವನ್ನು

ಸ್ಥಾಪಿಸಿದರು. ಇವರೆಲ್ಲ ಹೊಟೇಲಿಸಿಂದ ಮೂವರ ಆಹಾರ ತಂದು ೬—೭ ಜನರು ಊಟಮಾಡುತ್ತಿದ್ದರು. ಡಾಕ್ಟರರು ಊಟವಾದ ಬಳಿಕ ತಾಟು ಪಾತ್ರೆಗಳನ್ನು ತೊಳೆಯುವುದು, ಪೇಟೆಯಿಂದ ಸಾಮಾನು ತರುವುದು ಮಾಡುತ್ತಿದ್ದರು.

ಅಂಕಲೀಕರರು ಡಾಕ್ಟರರಿಗೆ ತಮ್ಮ ಪುಸ್ತಕಗಳನ್ನೋದಲು, ಕೋಣೆಯಲ್ಲಿರಲು ಆಸ್ಪದ ಕೊಡುತ್ತಿದ್ದರು. ಅವರ ಕೋಣೆಯಲ್ಲಿ ಸ್ಥಳವಿಲ್ಲದಿದ್ದಾಗ ಹೊರಗೆ ಅಟ್ಟದ ಮೆಟ್ಟಿಲುಗಳ ಮೇಲೆ ಎಲ್ಲರೂ ಮಲಗಿದ ಮೇಲೆ ಮಲಗಿ, ಎಲ್ಲರಿಗಿಂತಲೂ ಮೊದಲೇ ಏಳುತ್ತಿದ್ದರು. ಕೊನೆಕೊನೆಗೆ ಕರ್ನಾಟಕ ಮಂಡಲದವರು ತಮಗಾಗಿ ಒಂದು ಸ್ವತಂತ್ರ ಮನೆಯನ್ನೆ ಬಾಡಿಗೆ ತೆಗೆದುಕೊಂಡು ಅಡಿಗೆಯವನನ್ನೊಬ್ಬನನ್ನು ನಿಯಮಿಸಿಕೊಂಡರು. ಅಲ್ಲಿ ಡಾಕ್ಟರರು ಚಿಲ್ಲರೆ ಕೆಲಸಗಳನ್ನು ಮಾಡುತ್ತ ಊಟ ಮಾಡಿಕೊಂಡಿದ್ದರು.

## ಅಮೇರಿಕೆಗೆ ಹೋಗುವ ಸಿದ್ಧತೆ.

ಡಾಕ್ಟರರ ಜತೆಗಾರರಿಬ್ಬರು ಸಿರಿವಂತರಾಗಿದ್ದುದರಿಂದ ಹಣದ ಆಲೋಚನೆಯನ್ನು ಡಾಕ್ಟರರು ಮಾತ್ರ ಮಾಡಬೇಕಾಯಿತು. ಅಮೇರಿಕೆಗೆ ಹೋಗುವುದಕ್ಕೆ ಅಷ್ಟಿಷ್ಟು ಹಣಬೇಕೆಂಬುದನ್ನು ಲಕ್ಷ್ಯಕ್ಕೆ ತಾರದೆ ೧೦೦೦ ರೂ. ಸಾಕೆಂದು ಹಣ ಕೂಡಿಸತೊಡಗಿದರು. ಧಾರವಾಡ ಮುಂದಾಳುಗಳು ಇವರ ಬಗ್ಗೆ ಒಂದು ಪ್ರಸಿದ್ಧ ಪತ್ರಿಕೆಯನ್ನು ತೆಗೆದಿದ್ದರು. **ಕರಂದೀಕರರು** (ವಿದ್ಯಾಖಾತೆಯ ಇನ್ಸ್‌ಪೆಕ್ಟರರು) ೨೦೦ ರೂ ಕೊಟ್ಟರು. ಜಮುಖಂಡೀ ಸಂಸ್ಥಾನದ ದಿವಾನರಾಗಿದ್ದ ಮೋಘೆಯವರ ಸಹಾಯದಿಂದ ಡಾಕ್ಟರರು ಮಹಾರಾಜರನ್ನು ಕಂಡು ತಾವು ಬಂದ ಉದ್ದೇಶವನ್ನು ಹೇಳಿ, ೧೦೦೦ ರೂಪಾಯಿಗಳ ವಚನವನ್ನು ಪಡೆದರು. ಮೋಘೆಯವರಿಂದ ಕೊಲ್ಲಾಪುರದ ದಿವಾನರಾದ ಸಬನೀಸರಿಗೆ ಪತ್ರವನ್ನು ಪಡೆದು, ಇವರ ಮೂಲಕ ಕೊಲ್ಲಾಪುರದ ಮಹಾರಾಜರನ್ನು ಕಂಡರು. ಅಲ್ಲಿ ೫೦೦೦ ದ ವಚನ ತೆಗೆದುಕೊಂಡರು. ಇದೇ ಮೇರೆಗೆ

ಮುಧೋಳ, ರಾಮದುರ್ಗ ಸಂಸ್ಥಾನಾಧೀಶರು ವಚನವನ್ನಿತ್ತಿದ್ದರು. ಆದರೆ ಈ ವಿಷಯವು ಈ ಸಂಸ್ಥಾನಗಳ, ಆಗಿನ **ಪೋಲಿಟಿಕಲ್** ಏಜಂಟರಾದ ಎಂ. **ಉಡ್ ಹೌಸ** ಎಂಬುವವರ ಕಿವಿಯವರೆಗೂ ಹೋಯಿತು. ಡಾಕ್ಟರರು ಹುಬ್ಬಳ್ಳಿಯಲ್ಲಿದ್ದು ಸ್ವದೇಶಿ ಮೊದಲಾದ ಆಂದೋಲನಗಳಲ್ಲಿ ಭಾಗತೆಗೆದುಕೊಂಡುದರಿಂದ ಸರಕಾರದ ಪುಸ್ತಕದಲ್ಲಿ ( Black list ) ಇವರ ಹೆಸರು ಸೇರಿಸಲಾಗಿತ್ತು. ಉಡ್ ಹೌಸರು ಡಾಕ್ಟರರನ್ನು ಕರೆಯಿಸಿ ' ಚಿಂತೆಮಾಡಬೇಡಿ. **ನಿಮಗೆ ಹಣ ಸಿಗದಂತೆ ವ್ಯವಸ್ಥೆ ಮಾಡುವೆ** ' ಎಂದು ಹೇಳಿಕಳಿಸಿದರು. ಅದೇ ಪ್ರಕಾರ ಡಾಕ್ಟರರಿಗೆ ಈ ವಚನಗಳು ಫಲವೆಂದು ಒಂದುಕಾಸು ದೊರೆಯಲಿಲ್ಲ. ಡಾಕ್ಟರರು ಎದೆಗುಂದಲಿಲ್ಲ; ಕೈಕಾಲು ಬಿಡಲಿಲ್ಲ. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವೆಂದು ತಲ್ಲಣಿಸಲಿಲ್ಲ. ' ಬಂದುದು ಬರಲಿ, ದೇವರ ದಯವೊಂದಿರಲಿ ' ಎಂದು ಕರ್ನಾಟಕ–ಮಹಾರಾಷ್ಟ್ರಗಳಲ್ಲಿ ಮನೆ ಮನೆ ತಿರುಗಿ ಆಣೆ ಕಾಸುಗಳಂತೆ ಹಣಕೂಡಿಸಿದರು. ಹೊರಡುವಾಗ ಬಟ್ಟೆ, ಫಲಾಹಾರ, ಕೆಲವೊಂದು ಹಣ ಶೇವಡೆಯುವರ ಮನೆಯಿಂದ ದೊರೆತವು. ಮುಂಬಯಿ ಬಂದರ ಬಿಡುವಾಗ ಇವರ ಹತ್ತಿರ ೭೦೦ ರೂಪಾಯಿ, ಲಂಡನ್ ವರೆಗೆ ಒಂದು ತಿಕೇಟು ಮಾತ್ರ ಇದ್ದುವು.

## ಅಮೇರಿಕೆಯಲ್ಲಿಯ ದುಃಖ

ನ್ಯೂಯಾರ್ಕ ಪಟ್ಟಣವನ್ನು ಇವರು ಸೇರಿದಾಗ ೩೦೦, ಆ್ಯನ್ ಆರ್ಬರಕ್ಕೆ ಹೋದಾಗ ೧೫೦ರೂ. ಇವರಲ್ಲಿ ಉಳಿದಿದ್ದವು. ಅಲ್ಲಿಗೆ ಹೋದ ಕೂಡಲೇ ಮೂವರೂ ಮೆಡಿಕಲ್ ಡಿಪಾರ್ಟಮೆಂಟಿನ ಮುಖ್ಯಾಧಿಕಾರಿ (ಡೀನ್)ಯನ್ನು ಕಂಡರು. ತಮಗೆ ಪ್ರವೇಶ ದೊರೆತು, ಅಭ್ಯಾಸ ಆರಂಭವಾದೊಡನೆ ಉದ್ಯೋಗದ ಯೋಚನೆಮಾಡತೊಡಗಿದರು. ಮನೆಯಿಂದ ಹಣತರಿಸಲು ಸಾಧ್ಯವಿದ್ದರೂ ಉಳಿದಿಬ್ಬರೂ ದುಡಿದೇ ಹೊಟ್ಟೆತುಂಬಿಕೊಳ್ಳಲು ನಿಶ್ಚಯಿಸಿದರು. ಎಲ್ಲರೂ ರವಿವಾರ, ಚರ್ಚಿಗೆ ಹೋಗಿ ಕಸ ಉಡುಗುವುದು, ಜಮಖಾನೆಗಳನ್ನು ಕೊಡವಿ ಹಾಸುವುದು, ಕುರ್ಚಿ

ಗಳನ್ನು ಒರಿಸಿಡುವುದು, ಚರ್ಚಿನ ಗೋಡೆಗಳಿಗೆ ಸುಣ್ಣಹಚ್ಚುವುದನ್ನೆಲ್ಲ ಮಾಡುತ್ತಿದ್ದರು. ಇದರಿಂದ ಇರಲು ಒಂದು ಕೋಣೆ ಪುಕ್ಕಟೆಯಾಗಿ ದೊರೆಯುತ್ತಿತ್ತು. ಅಥವಾ ೧ ಗಂಟೆಗೆ ೨೫ ಸೆಂಟ್ಸ್ ದೊರೆಯುತ್ತಿದ್ದವು. ಹೊಟೇಲ್‌ಗಳಲ್ಲಿ ಊಟಮಾಡಿದ ಎಂಜಲು ಪಾತ್ರೆಗಳನ್ನು ತೊಳೆಯುವದರಿಂದ ಒಪ್ಪತ್ತಿನ ಊಟವು ಸಿಗುತಿತ್ತು. ವಿಶ್ವವಿದ್ಯಾಲಯದ ಔಷಧಾಲಯದಲ್ಲಿ ಜಡ ವಿಸಲ್ಲಿ ದುಡಿದು ೧ ಗಂಟೆಗೆ ೨೫ ಸೆಂಟಿನಂತೆ ಗಳಿಸುತ್ತಿದ್ದರು. ಈ ಹಣವನ್ನೆಲ್ಲ ಪುಸ್ತಕ ಮೊದಲಾದವುಗಳಿಗಾಗಿ ಉಪಯೋಗಿಸುತ್ತಿದ್ದರು. ಮನೆಯ ತೋಟದ ಗಿಡಗಳಿಗೆ ನೀರು ಹಾಕುವುದು, ಗಿಡಗಳನ್ನು ಚೆಂದಕಾಣುವಂತೆ ಕತ್ತರಿಸುವುದು, ಬಟ್ಟೆಗಳನ್ನು ಒಗೆಯುವುದು, ಮೊದಲಾದ ಕೆಲಸಗಳಿಂದಲೂ ಹೊಟ್ಟೆತುಂಬಿಕೊಳ್ಳುತಿದ್ದರು. ಬರಬರುತ್ತ ಎಲ್ಲರ ಪರಿಚಯವಾಗುತ್ತ ಹೋದ ಹಾಗೆ ಚೆನ್ನಾದ ಕೆಲಸಗಳು ದೊರೆಯುತೊಡಗಿದುವು. ಮುಂದೆ ೬ ತಿಂಗಳಲ್ಲಿ ವರ್ಷಕ್ಕೆ ೩೦೦ ಡಾಲರು ದೊರೆಯುವಂತಹ ಶಿಷ್ಯವೃತ್ತಿಯನ್ನು ಮೆಡಿಕಲ್ ಡಿಪಾರ್ಟ್‌ಮೆಂಟಿನ ಡೀನರು ಹರಡೀಕರರಿಗೆ ಕೊಡಿಸಿದರು. ಇದು ೨ ವರುಷಗಳ ವರೆಗೆ ಸಾಗಿತು. ೩ನೇವರ್ಷ ಇದೇ ಹಣದ ಮೇಲೆ ವಿಶ್ವವಿದ್ಯಾಲದ ವತಿಯಿಂದ ಹಿಂದುಸ್ಥಾನ ಹಾಗು ಪರರಾಷ್ಟ್ರಗಳ ಸಂಬಂಧವಾಗಿ ಭಾಷಣಮಾಡಲು ಡಾಕ್ಟರರನ್ನು ನಿಯಮಿಸಿಕೊಂಡರು. ವಾರಕ್ಕೊಂದು ಇಲ್ಲವೆ ಜನರ ಬೇಡಿಕೆಯಂತೆ ಹೆಚ್ಚು ಭಾಷಣಗಳನ್ನು ಬೇರೆ ಬೇರೆ ಸ್ಥಳಗಳಲ್ಲಿ ಮಾಡುತ್ತಿದ್ದರು. ಪ್ರತಿಯೊಂದು ಭಾಷಣಕ್ಕೆ ೨೦-೨೫ ಡಾಲರುಗಳು ದೊರೆಯುತ್ತಿದ್ದವು.

ಇಷ್ಟಾದರೂ ದೊರೆಯುತ್ತಿದ್ದ ಹಣವು ವೆಚ್ಚಕ್ಕೆ ಸಾಲುತ್ತಿರಲಿಲ್ಲ. ಅದರಿಂದ ಯಾವುದಾದರೂ ಕೆಲಸಸಿಗುವ ಹಾದಿಯನ್ನೆನೋಡುತ್ತಿದ್ದರು. ಇಷ್ಟರಲ್ಲಿ ಮಹಾಯುದ್ಧದಲ್ಲಿ ಬೇಕಾಗುವ ಗುಂಡುಗಳನ್ನು ಸಿದ್ಧಮಾಡುವ ಕಾರ್ಯವು ಆರಂಭವಾಗಿ ಹಗಲೂ ರಾತ್ರಿಯೂ ನಡೆಯುತ್ತಿತ್ತು. ಗುಂಡುಗಳೆಂದರೆ ಸೈಕಲ್ ಮೋಟಾರು ಗಾಲಿಗಳಲ್ಲಿ ಹಾಕುವ ಗುಂಡುಗಳು. ಹಗಲಿನಕಿಂತ ರಾತ್ರೆಯ ಕೆಲಸದಲ್ಲಿ ಹೆಚ್ಚು ಹಣವು ಸಿಗುತ್ತಿದ್ದುದರಿಂದ ಈ ಗುಂಡು ಸಿದ್ಧಮಾಡುವ ರಾತ್ರೆ ಕೆಲಸವನ್ನೆ

ಕೈಕೊಂಡರು. ಸಂಜೆಯ ೬ ಗಂಟೆಗೆ ಕೆಲಸವು ಆರಂಭವಾಗಿ ಮುಂಜಾನೆ ೬ ಗಂಟೆಗೆ ಕೆಲಸವು ಮುಗಿಯುತ್ತಿತ್ತು. ನಡುವೆ ೧ ಗಂಟೆ ಊಟಕ್ಕೆ ಬಿಡುವು. ಗುಂಡುಗಳನ್ನು ಸಿದ್ಧಮಾಡುವುದಕ್ಕೆ ಸಾವಿರಾರು ಬೀಸುವ ಕಲ್ಲುಗಳನ್ನು ಹಾಕಿರುತ್ತಿದ್ದು ಅವೆಲ್ಲವೂ ಯಂತ್ರದ ಸಹಾಯ ದಿಂದ ನಡೆಯುತ್ತಿದ್ದುವು. ಬೇಕಾದಾಗ ಬೇಕಾದ ಕಲ್ಲನ್ನು ಆರಂಭಿಸಲು, ನಿಲ್ಲಿಸಲು, ಬರುವಂತೆ ವ್ಯವಸ್ಥೆಯಿರುತ್ತಿತ್ತು. ಈ ಕಲ್ಲುಗಳಲ್ಲಿ ಗುಂಡಿಗೆ ಬೇಕಾಗುವ ಧಾತುವಿನ ಅಳತೆಯ ತುಂಡುಗಳನ್ನು ಹಾಕಿ ಕಲ್ಲನ್ನು ತಿರುವಿದರೆ, ತುಂಡುಗಳು ದುಂಡಗಾಗುತ್ತ ನಡೆಯುತ್ತಿದ್ದುವು. ಮೇಲೆ ಎಣ್ಣೆ ಬಿಡುತ್ತ ನಿಲ್ಲಬೇಕಾಗುತ್ತಿದ್ದಿತು. ಗೊತ್ತಾದ ಅಳತೆಗೆ ಬಂದ ಕೂಡಲೇ ಆ ಗುಂಡನ್ನು ತೆಗೆದುಕೊಂಡು ಬಿಡುತ್ತಿದ್ದರು. ಪ್ರತಿವಾರಕ್ಕೆ ೨೦ ಡಾಲರುಗಳು ಈ ಕೆಲಸದಿಂದ ದೊರೆಯುತ್ತಿದ್ದುವು. ೩ ತಿಂಗಳ ವರೆಗೆ ದುಡಿದು ತಮಗೆ ಬೇಕಾದ ವೆಚ್ಚಕ್ಕಾಗಿ ಹಣವನ್ನು ಸಂಪಾದಿಸಿದರು.

## ಬಡತನಕ್ಕಾಗಿ ಮಾಂಸಾಹಾರ

ಪ್ರಯೋಗಶಾಲೆಯಲ್ಲಿ ಕೆಲಸಮಾಡಲು ಇನ್ನಿತರ ಕಡೆ ದುಡಿಯಲು ಹೋಗುವಾಗ ಒಂದು ಸೀಸೆಯಲ್ಲಿ ಹಾಲು, ಕೆಲವು ಬಿಸ್ಕೀಟುಗಳನ್ನು ತೆಗೆದುಕೊಂಡು ಗೊತ್ತಾದ ವೇಳೆಗೆ ತಿನ್ನುತಿದ್ದರು. ಮನೆಗೆ ಬಂದ ಬಳಿಕ ಸಹ ಅದನ್ನೆ ತಿನ್ನಬೇಕಾಗುತ್ತಿದ್ದಿತು. ವೈಮುರಿ ದುಡಿತ, ಮೇಲೆ ಹೊಟೇಲುಗಳಲ್ಲಿ ಶಾಖಾಹಾರವನ್ನು ಬೇಡಿದರೆ, ಹಾಲು ಬಿಸ್ಕೀಟುಗಳ ಹೊರತಾಗಿ ಏನೂ ದೊರೆಯುತ್ತಿರಲಿಲ್ಲ. ಹೀಗಾಗಿ ಶಾಕಾಹಾರದ ಮೂಲಕ ವೆಚ್ಚವು ಬಹಳವಾಗತೊಡಗಿತು. ಒಂದು ವರ್ಷದ ವರೆಗೆ ಹಾಗೂ ಹೀಗೂ ಶಾಕಾಹಾರಿಗಳಾಗಿಯೇ ಇದ್ದರು. ಮುಂದೆ ಸಾಗದಂತಾಗಲು ಮಾಂಸಾಹಾರವನ್ನು ಪ್ರಾರಂಭಿಸಿದರು.

## ಲಾಲಾಜಿಯವರನ್ನು ಕೂಡಿದ ನಂತರ

ಲಜಪತರಾಯರೊಡನೆ ಕೆಲಸ ಮಾಡತೊಡಗಿದ ನಂತರ ಡಾಕ್ಟರರಿಗೆ

ತಮ್ಮ ವೇಳೆಯನ್ನೆಲ್ಲ ರಾಜಕೀಯ ಕಾರ್ಯಕ್ಕಾಗಿಯೇ ವೆಚ್ಚ ಮಾಡಬೇಕಾಗುತಿದ್ದಿತು. ದುಡಿದು ಹೊಟ್ಟೆ ತುಂಬಿಕೊಳ್ಳಲು ಸಾಧ್ಯವಿರಲಿಲ್ಲ. ಆದ್ದರಿಂದ ಹೋಂರೂಲ್ ಲೀಗದ ಅಧ್ಯಕ್ಷರಾದ ಲಾಲಾಜಿಯವರು ಡಾಕ್ಟರರಿಗೆ ಪಗಾರಕ್ಕೆ ೧೦ ಡಾಲರುಗಳನ್ನು ಕೊಡುತ್ತ ಮುಂದೆ ೧೫-೨೦ ರ ವರೆಗೆ ಹೆಚ್ಚು ಮಾಡಿದರು. ಲಾಲಾಜಿಯವರು ಹಿಂದುಸ್ಥಾನಕ್ಕೆ ಬಂದ ನಂತರ ಎಲ್ಲ ಕಾರ್ಯದ ಭಾರವೂ ಇವರ ಮೇಲೆಯೆ ಬಿತ್ತು. ಈ ಕಾಲಕ್ಕೆ ಅವರು ೨೫ ಡಾಲರು ತೆಗೆದುಕೊಳ್ಳುತ್ತಿದ್ದರು. ನ್ಯೂಯಾರ್ಕದ ಜೀವನವು ತುಂಬ ವೆಚ್ಚದ್ದು, ಇದಲ್ಲದೆ ಯೋಗ್ಯತೆಗನುಸರಿಸಿ ಜನರ ಸಂಬಂಧವನ್ನಿಡಬೇಕಾದುದರಿಂದ ಇವರು ತೆಗೆದುಕೊಳ್ಳುತ್ತಿದ್ದ ಹಣದ ಪ್ರಮಾಣವು ಏರುತ್ತ ಹೋಯಿತು.

## ಹಿಂದುಸ್ಥಾನದಲ್ಲಿ

ಅಮೇರಿಕೆಯಿಂದ ಬಂದ ಬಳಿಕ ೧೯೨೨ರಲ್ಲಿ ಕ. ಪ್ರಾ. ಕಾಂ. ಕಮಿಟಿಯವರು ಇವರಿಗೆ ಅವರ ಸ್ವಂತ ವೆಚ್ಚಕ್ಕಾಗಿ ತಿಂಗಳಿಗೆ ೫೦ ರೂ. ಯಂತೆ ಕೊಡುತ್ತಿದ್ದರು. ಈ ರೀತಿ ಹಣ ತೆಗೆದುಕೊಳ್ಳುವುದು ಇವರಿಗೆ ಸರಿ ಎನಿಸದುದರಿಂದ ಒಂದು ವರ್ಷದ ಮೇಲೆ ಹಣ ತೆಗೆದುಕೊಳ್ಳುವುದನ್ನು ಬಿಟ್ಟುಬಿಟ್ಟರು. ಅವಶ್ಯವಿದ್ದಾಗ ಇವರ ಬಟ್ಟೆ ಮೊದಲಾದ ಸ್ವಂತ ವೆಚ್ಚಕ್ಕಾಗಿ ಕೌಜಲಗಿ ಶ್ರೀನಿವಾಸರಾಯರು, ನ. ಚಿ. ಕೇಳಕರರು, ಲಾಲಾಜಿಯವರು, ಪಂ. ಜವಾಹರಲಾಲರು ಮೊದಲಾದವರಲ್ಲದೆ ಇನ್ನೂ ಕೆಲವು ಹಿತಚಿಂತಕರು ಸಹಾಯ ಮಾಡುತ್ತಿದ್ದಾರೆ. ಹುಬ್ಬಳ್ಳಿಯ ಶೀವಡೆಯ ಮನೆತನವು ಅವರನ್ನು ಇಂದಿನ ವರೆಗೂ ತಮ್ಮ ಮನೆಯವರೆಂದೇ ತಿಳಿದು ಅವರ ಪರಾಂಬರಿಕೆ ಮಾಡುತ್ತಿದೆ.

## ಲೋ. ತಿಲಕರ ನೆರವು.

ಹಿಂದುಸ್ಥಾನದ ವಿಷಯವಾಗಿ ಅಮೇರಿಕೆಯಲ್ಲಿ ಲಾಲಾಜಿಯವರು ನಡೆಯಿಸಿದ ಪ್ರಚಾರ ಕಾರ್ಯವು ಕೇವಲ ಭಿಕ್ಷೆಯಿಂದಲೇ ನಡೆದಿತ್ತು.

ಹಣದ ತೊಂದರೆಗಳು ಮೇಲಿಂದ ಮೇಲೆ ಬರುತ್ತಿದ್ದುವು. ಒಂದು ಸಲ ಹರಡೀಕರರು ತಮ್ಮ ಅಣ್ಣಂದಿರಾದ ಲಕ್ಷ್ಮಣರಾಯರಿಗೆ ತಾವೂ ಲಾಲಾಜಿಯವರೂ ಪಡುತ್ತಿರುವ ಕಷ್ಟಗಳನ್ನು ಕುರಿತು ಪತ್ರವೊಂದನ್ನು ಬರೆದಿದ್ದರು. ಲಕ್ಷ್ಮಣರಾಯರು ಅದನ್ನು ಲೋ.ತಿಲಕರಿಗೆ ತೋರಿಸಿದರು. ಪತ್ರವನ್ನು ಓದಿದ ಕೂಡಲೇ ತಿಲಕರು ಅಪಾರ ದುಃಖಪಟ್ಟು ೫೦೦೦ ಡಾಲರುಗಳನ್ನು ಹರಡೀಕರರಿಗೆ ಮುಟ್ಟುವಂತೆ ವ್ಯವಸ್ಥೆ ಮಾಡಿದರು. (೧ ಡಾಲರೆಂಪರೆ ೩ರೂ. ೨ ಆಣೆ) ಹುಬ್ಬಳ್ಳಿಯ ಶೇವಡೆಯವರಿಂದಲೂ ಅವರಿಗೆ ೧-೨ ಸಲ ಹಣವು ಬಂದಿತು. ಕರ್ನಾಟಕದ ಕುಲಪುರೋಹಿತರಾದ ಆಲೂರ ವೆಂಕಟರಾಯರು ಒಂದು ಸಲ ೧೦೦ರೂ. ಕಳಿಸಿದ್ದರು. ಲಕ್ಷ್ಮಣರಾಯರು ಲೋ. ತಿಲಕರಂತಹ ದೊಡ್ಡ ಗೃಹಸ್ಥರ ಸಹಿಗಳನ್ನೊಳಗೊಂಡ ಬಿನ್ನಹ ಪತ್ರವನ್ನು ತೆಗೆದುಕೊಂಡು, ಕರ್ನಾಟಕದಲ್ಲಿ ತಿರುಗಿ ೫೦೦ರೂ. ಕೂಡಿಸಿ ಕಳಿಸಿದರು. ನ. ಚಿ. ಕೇಳಕರರು ಡಾಕ್ಟರರು ಅಮೇರಿಕೆಯನ್ನು ಬಿಡುವ ಸಮಯದಲ್ಲಿ ೧೦೦೦ರೂ. ಕಳಿಸಿದ್ದರು.

## ಡಾಕ್ಟರರ ಸ್ವತ್ತು

ಇವರ ಧಾರವಾಡದ ಮನೆ ಮಾರಿಹೋಯಿತು. ಹಾನಗಲ್ಲ ತಾಲೂಕಿನ ತಿಳವಳ್ಳಿಯಲ್ಲಿಯ ೧-೨ ಹೊಲಗಳು ಇವರ ಅಣ್ಣಂದಿರಾದ ಲಕ್ಷ್ಮಣರಾಯರ ವಶದಲ್ಲಿವೆ. ವಿದ್ಯಾರ್ಥಿಯಾಗಿದ್ದಂದಿನಿಂದಲೂ ಇವರು ರಾಜಕಾರಣದಲ್ಲಿದ್ದುದರಿಂದ ಇವರಿಗೆ ತಮ್ಮ ಸಲುವಾಗಿ ದುಡಿಯಲು ಅನುಕೂಲವೇ ಆಗಲಿಲ್ಲ. ಅಂದಿನಿಂದ ಇಂದಿನ ವರೆಗೆ ಇವರು ಬಡವರಾಗಿಯೇ ಇರುತ್ತಾರೆ. ತನುಮನಗಳನ್ನೆಲ್ಲ ತಾಯಿನಾಡಿಗಿತ್ತು 'ಪರದೇಶಿ'ಗಳಾದವರಿವರು. **ಹಿಂದುಸ್ಥಾನವೇ ಅವರ ಸ್ಥಿರಚರಸೊತ್ತು; ದೇಶಸೇವೆಯೇ ಅವರ ಉದ್ಯೋಗ.**

# ಸೈನಿಕನು ಸೇನಾಪತಿಯಾದುದು

೧೮೫೭ನೇ ಇಸ್ವಿಯು ಬಂಡಾಯದ ನಂತರ ದಂಡೆಂದರೆ ಅಪರೂಪ. ಭೇರಿ–ಕಾಳೆಗ, ಸೈನಿಕ–ಸೇನಾಪತಿ, ಸೋಲು–ಗೆಲವುಗಳೆಂದರೆ ಚರಿತ್ರೆ ಇತಿಹಾಸಗಳಲ್ಲಿ, ಕತೆ–ಕಾದಂಬರಿಗಳಲ್ಲಿ, ಚಿತ್ರ-ಶಿಲ್ಪಗಳಲ್ಲಿ. ಶಸ್ತ್ರಾಸ್ತ್ರಗಳು ಮಾಯವಾದುವು. ವೀರರು ಹುಟ್ಟದಾದರು. ಕಲಿತನವು ಕಾಣದಾಯಿತು. ಮೈಜೋಡ ಕಟ್ಟಿ, ಪರಚಕ್ರಗಳ ಮೆಟ್ಟಿ, ನಾಡ ಕಾಪಿಡುವ ಗಂಡುಗಲಿಗಳ ತಂಡವು ಕರಗಿ ಹೋಯಿತು.

ದಂಡೆಂದರೆ ಆಗೊಮ್ಮೆ ಈಗೊಮ್ಮೆ ಪುಣೆ ಬೆಂಗಳೂರ ಮಾರ್ಗವಾಗಿ ಇತ್ತಿಂದತ್ತ ಅತ್ತಿಂದಿತ್ತ ಓಡಾಡುವ ದಂಡೇ ದಂಡು. ಅದನ್ನು ಕಂಡು ದೂರದಲ್ಲಿ ನಿಂತು ನೋಡಿ, ಅಚ್ಚರಿ ಪಡುವ ಬಂಟರೇ ಬಂಟರು. ತಾಳ ತಮ್ಮಟೆಯು, ಢೋಲು–ಭೇರಿಗಳ ನಾದವು ಕೇಳದಾಯಿತು. ಕತ್ತಿ ಕಠಾರಿಗಳ ಹಿಡಿಯುವುದು, ಕಿರಿಗತ್ತಿ ಭಾಲೆಗಳ ತಿರುವುದು ಬರದಾಯಿತು. ಶೌರ್ಯೋತ್ಸಾಹಗಳು ಕನಸು ಮನಸ್ಸಿನಲ್ಲಿಯೂ ಅಡಗಿ ಹೋದವು. ಈ ದಂಡಿನೊಳಗಿನ ಗಂಡಾಳುಗಳಾದರೊ ನಿರ್ಜೀವ ವಸ್ತುಗಳು. ಮುಡಿಗೆ ಮೈಜೋಡುಗಳ ತೊಟ್ಟು, ಕೈಯಲ್ಲಿ ಖಡ್ಗವನ್ನಿಟ್ಟು, ನಾಡಿಗಾಗಿ ಪ್ರಾಣವ ಕೊಟ್ಟು, ರಣದುಂದುಭಿಯ ನಿನಾದದಿಂದ ಉಕ್ಕಿ ಬರುವ ಉತ್ಸಾಹದೊಡನೆ, ಹೂಂಕರಿಸುತ ಹೆಜ್ಜೆಯಿಕ್ಕುತಿರುವ ವೀರಾಧಿವೀರರೆಲ್ಲಿ? ಹಾಕಿದನು ಉಂಡು,ಹೇಳಿದನು ಕೇಳಿ,ಸಾವಿಗಾಗಿ ಬಾಳುತಿರುವ ಸ್ವಾಭಿಮಾನ ಸ್ವದೇಶಾಭಿಮಾನ ಶೂನ್ಯ ಮಾನವಯಂತ್ರಗಳೆಲ್ಲಿ! ಇಂತಹರ ಕಂಡು ಅದಾರಿಗೆ ಮೈಯುಬ್ಬಬೇಕು? ಅದಾರಿಗೆ ರಣೋತ್ಸಾಹದ ಸ್ಫೂರ್ತಿಯಾಗಬೇಕು? ಅದಾರಿಗೆ ಸೈನಿಕನಾಗುವ ಕಲ್ಪನೆ ಬರಬೇಕು?

ಚೇತನಕ್ಕೆ ಜಡವು ಅಡಿಗಲ್ಲೇ? ಜೀವನ್ಮೃತ ಸೈನ್ಯವನ್ನು ಕಂಡು, ಸೈನಿಕನಾಗಬೇಕೆಂಬ ಕಲ್ಪನೆಯು ಬರಬಹುದು. ಬಂದರೂ ಕಾರ್ಯದಲ್ಲಿಳಿಯದೆ ಕಮರಿ ಹೋಗುವದೇ ಹೆಚ್ಚಲ್ಲದೆ ಕೊನರಿ ಚಿಗಿವುದು ಕಡಿಮೆ· ಆದರೆ ಚೇತನಕ್ಕೆ ಮಾತ್ರ ಜಡವೂ ಚೈತನ್ಯವೇ. ಡಾಕ್ಟರರು ಈ ಜಡ ಸೈನ್ಯವನ್ನು ಚೈತನ್ಯವುಳ್ಳುದಾಗಿ ಕಂಡರು.

ಒಮ್ಮೆ ದಂಡು ಧಾರವಾಡದ ಹತ್ತರ ಹಾಯುತಿರುವಾಗ ಎಲ್ಲರೂ ನೋಡಲು ಹೋಗುವಂತೆ ಹರಡೀಕರರು ಹೋಗಿದ್ದರು. ಆಗ ಇವರಿಗೆ ೭-೮ ವರ್ಷ. ಸೈನಿಕರನ್ನು ಕಂಡು ಒಮ್ಮೆಲೇ ಈ ಹುಡುಗನಿಗೆ ತಾನೂ ಇವರಂತಾಗಬೇಕೆಂದೆನಿಸಿತಂತೆ.

ಒಮ್ಮೆ ಧಾರವಾಡದಿಂದ ಹುಬ್ಬಳ್ಳಿಗೆ ಬರುವಾಗ, ರೇಲ್ವೆಕಂಪನಿಯ ಬಯಲಿನಲ್ಲಿ ಕಂಪನಿಯ ಕೆಲವು ವಾಲಂಟಿಯರರು ಕವಾಯಿತು ಮಾಡು ವದನ್ನು ಕಂಡು "ನಾನೂ ಹೀಗೆ ಕವಾಯಿತು ಕಲಿಯಬೇಕು. ತರುಣರಿಗೆ ಕಲಿಸಬೇಕೆಂ" ದು ಅವರ ಬಗೆಯಲ್ಲಿ ವಿಚಾರ ಬಂದಿತಂತೆ. ಎಳೆಯರಿರುವಾಗ ಜಾಗ್ರತವಾದ ಸೈನಿಕ ಭಾವನೆಯೇ ಬೆಳೆದು,ಇಂದು ಅವರನ್ನು ಸೇನಾಪತಿಯನ್ನಾಗಿ ಮಾಡಿದೆ.

ಚಿಕ್ಕಂದಿನಲ್ಲಿ ಇವರು ಶಿವಾಜಿ, ರಾಣಾಪ್ರತಾಪಸಿಂಹರ ಶೌರ್ಯ ಸಾಹಸದ ಕಥೆಗಳನ್ನು,ಐತಿಹಾಸಿಕ ಯುದ್ಧದ ವಿಷಯಗಳನ್ನೊಳಗೊಂಡ ಕಾದಂಬರಿಗಳನ್ನು ಓದುತ್ತಿದ್ದರು. ಪತ್ತೆದಾರಿ ಕಾದಂಬರಿಗಳಲ್ಲಿ ಬಲು ಮೆಚ್ಚಿಕೆ ಇವರಿಗೆ.

ವಂಗಭಂಗದ ಆಂದೋಲನವು ಆರಂಭವಾದಾಗ ಹುಬ್ಬಳ್ಳಿಯಲ್ಲಿ ಆರ್ಯಬಾಲ ಸಭೆ, ವ್ಯಾಯಾಮ ಶಾಲೆಗಳನ್ನುಸ್ಥಾಪಿಸಿದರಷ್ಟೆ! ಅವುಗಳಲ್ಲಿಯ ತರುಣರಲ್ಲಿ ಅಚ್ಚು ಕಟ್ಟುತನ, ಸಂಪೂರ್ಣ ಶಿಸ್ತು, ಸೈನಿಕರಂತಹ ಉಡಿಗೆ-ತೊಡಿಗೆಗಳು ಅವಶ್ಯವಾಗಿರಬೇಕೆಂದು ಕಟ್ಟು ಮಾಡಿದ್ದರು. ಈ ವಿಷಯವಾಗಿ ಅವರು ಎಲ್ಲರೊಂದಿಗೆ ಬಹಳ ಕಠೋರವಾಗಿ ವರ್ತಿಸುತ್ತಿದ್ದರು. ಅಮೇರಿಕೆಗೆ ಹೋಗುವ ಮೊದಲೇ ಶಿಸ್ತಿನ ಕಡೆಗೆ ಇವರ ಲಕ್ಷ್ಯವು ಹೆಚ್ಚಾಗಿತ್ತು. ಆದರೆ ಇವರು ಇದೆಲ್ಲವನ್ನು ಇದರ ಅರ್ಥದ ಮರ್ಮವನ್ನರಿಯದೆ ಮಾಡುತ್ತಿದ್ದರು.

ಅಮೇರಿಕೆಯ ಪ್ರತಿಯೊಂದು ವಿಶ್ವವಿದ್ಯಾಲಯದಲ್ಲಿ ಮಿಲಿಟರಿ ಶಿಕ್ಷಣಕೊಡುವದುಂಟು. ಮಿಲಿಟರಿ ಅಧಿಕಾರಿಗಳೇ ವಿದ್ಯಾಲಯಗಳಿಗೆ ಬಂದು ಶಿಕ್ಷಣಕೊಡುವರು. ಪ್ರತಿಯೊಂದು ವಿದ್ಯಾಲಯದಲ್ಲಿ ೩೦–೪೦ ಸಾವಿರದ ವರೆಗೆ ವಿದ್ಯಾರ್ಥಿಗಳಿರುವರು. ತೀರ ಕಡಿಮೆಯೆಂದರೆ ೩೦೦೦–೪೦೦೦ ವಿದ್ಯಾರ್ಥಿಗಳು ಈ ಶಿಕ್ಷಣ ಪಡೆಯುತ್ತಾರೆ. ಈ ರೀತಿಯಾಗಿ ಅಮೇರಿಕಾ ಸರಕಾರವು ಪ್ರತಿವರ್ಷ ಲಕ್ಷಾಂತರ ತರುಣರಿಗೆ ದಂಡಿನ ಶಿಕ್ಷಣಕೊಟ್ಟು ಕಾದಿಟ್ಟ ಸೈನ್ಯವನ್ನು ಸಿದ್ಧಪಡಿಸುತ್ತದೆ. ಹರಡೀಕರರಾದರೂ ಮಿಚಿಗಾನ್ ವಿದ್ಯಾಲಯದಲ್ಲಿ ಶಿಕ್ಷಣ ಹೊಂದುತ್ತಿರುವ ವಿದ್ಯಾರ್ಥಿಗಳ ಪಟ್ಟಿಯಲ್ಲಿ, ತಮ್ಮ ಹೆಸರನ್ನು ಕೊಡಬೇಕೆಂದು ಯತ್ನಿಸಿದರು. ಆದರೆ ಅವರ ದೇಹವು ಆ ಶಿಕ್ಷಣಕ್ಕೆ ಅಯೋಗ್ಯವಾದುದಿರುವುದೆಂದು ಅದರಲ್ಲಿ ಪ್ರವೇಶವು ದೊರೆಯಲಿಲ್ಲ. ಈ ಶಿಕ್ಷಣ ಪಡೆಯಲು ಸಾಧ್ಯವಾಗದಿದ್ದರೂ ಬ್ರಿಟಿಷ್ ಹಾಗೂ ಬೇರೆ ಬೇರೆ ದೇಶಗಳ ಯುದ್ಧಗಳ ಪ್ರತಿಯೊಂದು ಮಹತ್ವದ ಸಂಗತಿಗಳನ್ನು ಓದಿ ಸಾರ್ವಜನಿಕ ಉಪಯೋಗಕ್ಕೆ ಅನುಕೂಲವಾದ ಎಲ್ಲ ಯುದ್ಧದ ನಕಾಶಗಳನ್ನು ದೊರಕಿಸಿ, ಅಭ್ಯಾಸ ಮಾಡುತ್ತಿದ್ದರು. ಹಿಂದುಸ್ಥಾನಕ್ಕೆ ಬರುವಾಗ, ಯುದ್ಧಭೂಮಿಗಳನ್ನು ನೋಡುವುದಲ್ಲದೆ ಯೋಧರನ್ನು ಕಂಡು ಅವರೊಡನೆ ಮಾತನಾಡಿ ಬರಬೇಕೆಂದು ಅವರ ಇಚ್ಛೆ ಇತ್ತು. ಆದರೆ ಅದು ಕೈಗೂಡಲಿಲ್ಲ.

ಕರ್ನಾಟಕ ಪ್ರಾಂತಕ್ಕೆ ಬಂದಮೇಲೆ ಸ್ವಯಂಸೇವಕರ ಸಂಘಟನೆ ಮಾಡಿ ಅವರಿಗೆ ಶಿಕ್ಷಣ ಕೊಡುವ ಕಾರ್ಯವನ್ನೇಕೆ ಆರಂಭಮಾಡಿದರೆಂದು ಹೇಳಲು ಬರುವಂತಿಲ್ಲ. ಇಲ್ಲಿಗೆ ಬಂದ ಕೂಡಲೇ ಈ ಕೆಲಸವನ್ನಾರಂಭಿಸಿದರು. ಅದೇ ತಮ್ಮ ಆಯುಷ್ಯದ ಕಾರ್ಯವೆಂದು ನಿರ್ಧರಿಸಿಕೊಂಡರು. ೧೯೨೧ರ ಅಹಮ್ಮದಾಬಾದ್ ಕಾಂಗ್ರೆಸ್ಸಿನ ಸ್ವಯಂಸೇವಕರ ಕಾರ್ಯಪದ್ಧತಿಯ ದೋಷಗಳನ್ನು ಕಂಡು ಹೊಸ ಪದ್ಧತಿಯ ಶಿಕ್ಷಣವನ್ನು ಕೊಡಲು ಸೇವಾದಲದಂತಹ ಸಂಸ್ಥೆಯನ್ನು ಸ್ಥಾಪಿಸುವ ಯೋಜನೆ ಮಾಡಿದರು. ಸೇವಾದಲದಂತಹ ಸಂಸ್ಥೆಯನ್ನು ಸ್ಥಾಪಿಸಿ, ಅದರಿಂದ ಇಡೀ ಹಿಂದುಸ್ಥಾನದ ತರುಣ ತರುಣಿಯರಿಗೆ ಶಿಸ್ತು, ಶೌರ್ಯ,

ಧೈರ್ಯ, ಸಾಹಸ, ಸ್ಫೂರ್ತಿಗಳುಂಟಾಗುವಂತೆ ಶಿಕ್ಷಣಕೊಡಲು, ನೂರಾರು ಶಿಬಿರಗಳನ್ನು ತೆರೆದು, ವ್ಯಾಯಾಮ ವಿದ್ಯಾಪೀಠವನ್ನು ಆರಂಭಿಸಿ, ದೇಶದಲ್ಲೆಲ್ಲ ಅಲ್ಲೋಲ ಕಲ್ಲೋಲವನ್ನುಂಟು ಮಾಡಿದರು. ತರುಣರ ತಲೆ ಕೆಡಿಸಿದರು; ಮುದುಕರ ಮೈಯುಬ್ಬಿಸಿದರು. ಸೈನಿಕರಾಗಿ ದುಡಿದರು; ಸೇನಾಪತಿಗಳಾಗಿ ಮೆರೆದರು. ಕನ್ನಡನಾಡಿನ ಕೀರ್ತಿಯನು ಭಾರತದಲ್ಲೆಲ್ಲ ಬೆಳಗಿಸಿದರು. ಜೈಭೇರಿಯನು ಮೊಳಗಿಸಿದರು.

ಇಷ್ಟೆಲ್ಲ ಮಾಡಿದ ಮುಂದಾಳುವು ತಾನು ಸ್ವತಃ ಈ ಶಿಕ್ಷಣವನ್ನೆಷ್ಟರ ಮಟ್ಟಿಗೆ ಹೊಂದಿರುವನೆಂದು ಯಾರಾದರೂ ಕೇಳಿದರೆ ಬರುವ ಉತ್ತರ ನಿಜವಾಗಿಯೂ ಅಚ್ಚರಿಯನ್ನುಂಟು ಮಾಡತಕ್ಕಂತಹದು. ಮಿಲಿಟರಿ, ಸ್ಕೌಟ್, ಸ್ವಯಂ ಸೇವಕರ ಯಾವುದೇ ಶಿಬಿರದಲ್ಲಿ ಅವರು ಶಿಕ್ಷಣ ಪಡೆಯಲಿಲ್ಲ. ಇದೂ ವರೆಗೂ ಇವರಿಗೆ ಈಸಲು, ಸಾಯ್‌ಕಲ್ ಹತ್ತಲು, ಮೋಟಾರು ನಡೆಯಿಸಲು ಬರುವದಿಲ್ಲ. **'ಸೇನಾಪತಿ ಡಾ. ಹರಡೀಕರ'** ಎಂಬ ಹೆಸರನ್ನು ಕೇಳಿದವರು ಇವರು ದಪ್ಪವಾದ, ಎತ್ತರವಾದ, ಸುದೃಢಶರೀರದ, ಉದ್ಗನ್ನ ಮಿಾಸೆಯ, ಸೈನಿಕ ಪೋಷಾಕಿನವರಿರಬೇಕೆಂದು ತಿಳಿದುಕೊಳ್ಳಬಹುದು. ಆದರೆ ಪ್ರತ್ಯಕ್ಷವಾಗಿ ಇವರನ್ನು ನೋಡಿದಲ್ಲಿ ಅಚ್ಚರಿಬಟ್ಟು 'ಇವರೆಯೆ ಡಾಕ್ಟರ್ ಹರಡೀಕರರು?' ಎಂದು ಉದ್ಗಾರವು ಹೊರಡಬಹುದು.

ಇವೆಲ್ಲ ಮಾತುಗಳಿಂದ ಹರಡೀಕರರು ಪೂರ್ವಜನ್ಮದ ಸಂಸ್ಕಾರಗಳಿಂದಲೇ ಇಂತಹಯೋಗ್ಯತೆಯನ್ನು ಪಡೆದಿರುವರಲ್ಲದೆ ಈ ಜನುಮದ ಪ್ರಯತ್ನದಿಂದಲ್ಲವೆಂದು ಹೇಳಬಹುದು. ಬಾಲ್ಯದಿಂದಲೂ ಸೈನಿಕ ಜೀವನದ ಬಗ್ಗೆ ಅವರಲ್ಲಿದ್ದ ಪ್ರೇಮವು ಈ ಮಾತಿಗೆ ಬಲವಾದ ಸಾಕ್ಷಿ. ಮಿಲಿಟರಿ ಮನುಷ್ಯನಲ್ಲಿರಬೇಕಾದ ಗುಣ-ಲಕ್ಷಣಗಳೆಲ್ಲ ಇವರಲ್ಲಿವೆ. ಹಣೆಯು ವಿಶಾಲ; ಕಣ್ಣಿನಲ್ಲಿ ತೇಜಸ್ಸು; ಹರವಾದ, ಗಟ್ಟಿಯಾದ ಎದೆ; ದೇಹವೆಲ್ಲ ಸಾಧಾರಣ ಮನುಷ್ಯನಿಗಿಂತ ಎತ್ತರವಾಗಿ ನಿಡಿದಾದುದು; ಕೂತರೂ, ನಿಂತರೂ, ಮಲಗಿದರೂ ಸರಳರೇಖೆಯಂತೆ ನೆಟ್ಟಗೆ ಇರುವದು. ಶೌರ್ಯ-ಧೈರ್ಯ-ಸಾಹಸ-ಸ್ಫೂರ್ತಿ, ಕಷ್ಟ ಸಹಿಷ್ಣುತೆ, ಸಹನಶೀಲತೆ,

ಮಹಾತ್ವಾಕಾಂಕ್ಷೆ, ದೂರದರ್ಶಿತ್ವ, ಯುಕ್ತಿಪ್ರಯುಕ್ತಿಗಳ ಯೋಜನಾಶಕ್ತಿ, ಅಚ್ಚುಕಟ್ಟುತನ, ನಿರಾಶನಾಗದಿರುವಿಕೆ, ಕೆಲಸಮಾಡುವ-ಮಾಡಿಸುವ ಗುಣಗಳು ಅಗಾಧವಾಗಿವೆ ಇವರಲ್ಲಿ.

ಹಿಂದುಸ್ಥಾನದಂತಹ ಪರತಂತ್ರ ದೇಶದಲ್ಲಿ ಅದೂ ಬಡವರ ಮನೆಯಲ್ಲಿ ಬೆಳೆದ ಡಾಕ್ಟರರ ದೇಹವು ಪುಷ್ಟವೆಂತಾಗಬೇಕು ? ಹೊತ್ತಿಗೆ ಸರಿಯಾಗಿ ಶಿಕ್ಷಣವೆಂತು ದೊರೆಯಬೇಕು, ದೇಶಕಾಗಿ ದುಡಿವುದೆಂದರೆ ಸರಕಾರದ ವಿರುದ್ಧ ಕೆಲಸ ಮಾಡುವುದು. ಸರಕಾರವ ವಿರೋಧಿಸಿ ಮುಂದೆ ಬರುವದೆಂತು ? ತನ್ನಲ್ಲಿದ್ದ ಶಕ್ತಿಗಳನ್ನೆಲ್ಲ ಜನತೆಗೆ ಉಪಯೋಗ ಮಾಡಿಕೊಡುವದೆಂತು ? ಸ್ವತಂತ್ರ ರಾಷ್ಟ್ರದಲ್ಲಿ ಡಾಕ್ಟರರು ಹುಟ್ಟಿದ್ದರೆ ಮಾನವ ವರ್ಗಕ್ಕೆಲ್ಲ ಇದಕ್ಕೂ ಹೆಚ್ಚಿಗೆ ಅವರಿಂದ ಉಪಯೋಗವಾಗಬಹುದಾಗಿತ್ತು. ಪರಿಸ್ಥಿತಿಯು ಪ್ರತಿಕೂಲವಿದ್ದರೂ ಸ್ವಯಂಸೇವಕ ಕಾರ್ಯವನ್ನು ಕೈಕೊಂಡು, ಸೈನಿಕನಾಗಿ ದುಡಿದು ಸೇನಾಪತಿಯಾದುದು ಅವರ ಪೂರ್ವ ಸಂಸ್ಕಾರದ ನೆರವು; ಸತತ ಪ್ರಯತ್ನದ ಫಲವು.

# ತನ್ನಿಂದ ತಾನು

ಹರಡೀಕರರ ಜೀವನವನ್ನು ನೋಡಿದರೆ ಇಷ್ಟೊಂದು ಪ್ರಸಿದ್ಧಿಗೆ ಅವರು ಹೇಗೆ ಬಂದಿರಬಹುದೆಂದು ಪ್ರತಿಯೊಬ್ಬನೂ ಎನ್ನುವಂತಿದೆ. ಬಡತನ, ಶಾರೀರಕ ಅಶಕ್ತತೆ, ಶಿಕ್ಷಣವು ಸರಿಯಾಗಿ ದೊರೆಯದಿರುವಿಕೆ, ಇವೆಲ್ಲವುಗಳಿಗೆ ಬೆದರಿ ಕೈಕಾಲುಗೆಟ್ಟಿದ್ದರೆ ಚಿಕ್ಕಂದಿನಲ್ಲಿಯೇ ಯಾವು ದೊಂದು ಸಾಮಾನ್ಯ ಕೆಲಸದಿಂದ ಹೊಟ್ಟೆತುಂಬಿಕೊಂಡಿರಬಹುದಿತ್ತು. ಇವರೊಂದಿಗೆ ಕಲಿಯುತ್ತಿದ್ದ, ಸರ್ವಾನುಕೂಲತೆಗಳುಳ್ಳ ಎಷ್ಟೋ ಸಿರಿ ವಂತ ತರುಣರು, ಇಂದಿಗೆ ಸರ್ವಸಾಮಾನ್ಯರಾಗಿರುವಾಗ ಅವರ ಸಹಾ ಯದಿಂದಲೇ ಸಾಧ್ಯವಿದ್ದಷ್ಟು ಮಾತ್ರ ವಿದ್ಯೆಯನ್ನು ಹೊಂದಿ, ಅವರೆಲ್ಲ ರಿಗೂ ಪರಮಾಶ್ಚರ್ಯವಾಗುವಂತೆ ಶ್ಲಾಘನೀಯ ಸ್ಥಿತಿಗೆ ಮುಟ್ಟಿ ದುದನ್ನು ಕಂಡರೆ, ಎಂತಹನಿಗಾದರೂ ಚಮತ್ಕಾರವೆನಿಸುತ್ತದೆ. ಇದಕ್ಕೆ ಕಾರಣ ಅವರಲ್ಲಿರುವ ಮಹಾತ್ವಾಕಾಂಕ್ಷೆ, ಸತತ ಪ್ರಯತ್ನ, ಕರ್ತೃತ್ವ ಶಕ್ತಿಗಳ ಫಲವೇ ಸರಿ.

ಮೆಟ್ರಿಕ್ ಪರೀಕ್ಷೆಗೆ ಬಂದು ಮುಟ್ಟಬೇಕಾದರೆ ಇವರು ಧಾರ ವಾಡ, ವಿಜಾಪುರ, ಪುಣೆ, ಕಲಘಟಗಿ, ಹುಬ್ಬಳ್ಳಿಗಳನ್ನು ತಿರುಗಬೇಕಾ ಕಾಯಿತು. ಅತ್ತ ಬಡತನಕ್ಕಾಗಿ ಬೇರೆಯವರ ಮನೆಯಲ್ಲಿದ್ದು ಅಭ್ಯಾಸ ಮಾಡಿ ಪರೀಕ್ಷೆ ಕಟ್ಟಿದರೆ ಅದರಲ್ಲಿಯೂ ಅಪಯಶಸ್ಸು. ಇತ್ತ ಕೇಸರೀ ಪತ್ರವು ದೊರೆತು, ಅದನ್ನೋದಿ, ಅದರಂತೆ ನಡೆಯುವ ಬುದ್ಧಿಯುಂಟಾ ಗಲು ಪೂರ್ವ ಸಂಸ್ಕಾರವೇ ಕಾರಣವೆಂದು ಹೇಳಬಹುದು. ಕೇಸರಿಯ ಪರಿಣಾಮದ ಮೂಲಕ 'ನಾನು ಸರಕಾರೀ ಉದ್ಯೋಗವನ್ನು

ಮಾಡಲಿಕ್ಕಿಲ್ಲ. ಬರೀ ಕಾರಕೂನನಾಗಿರುವುದಾದರೆ ನನ್ನ ಹುಟ್ಟು ಸಾರ್ಥಕವಾಗದೆಂದು ಚಿಕ್ಕ ವಯಸ್ಸಿನಲ್ಲಿಯೇ ಡಾಕ್ಟರರು ತಿಳಿದಿದ್ದರು.

ಮಹಾತ್ವಾಕಾಂಕ್ಷೆಯೇ ಅವರನ್ನು ಶಿಕ್ಷಣ ಪಡೆಯಲು ಕಲಕತ್ತೆಗೆ ಕರೆದುಕೊಂಡು ಹೋಯಿತು. ತಾನು ಬಡವನಾದರೂ ಸಿರಿವಂತ ಹುಡುಗರನ್ನು ಪರದೇಶಕ್ಕೆ ಹೊರಡಲು ಹುರಿದುಂಬಿಸಿದುದನ್ನು ಕಂಡರೆ ಯಾರಾದರೂ ಬೆರಳು ಕಚ್ಚುವಂತಿದೆ. ಅಮೇರಿಕೆಗೆ ಹೋಗುವುದಕ್ಕಾಗಿ ಬಡವರಾದ ಡಾಕ್ಟರರು ದೊಡ್ಡ ದೊಡ್ಡ ಸಂಸ್ಥಾನಿಕರನ್ನು ಹಣಕ್ಕಾಗಿ ಕಂಡು ವಚನಗಳನ್ನು ಪಡೆದು, ವಚನಗಳು ಫಲಿಸದಿರಲು ನಿರಾಶರಾಗದೆ ನಾಡಿನಲ್ಲೆಲ್ಲ ಮನೆ ಮನೆ ತಿರುಗಿ ಕೈಲಾದಷ್ಟು ಹಣಕೂಡಿಸಿ, ಸುತ್ತ ಮುತ್ತಲಿನ ಹಿರಿಯರ ಬೆಂಬಲವಿಲ್ಲದಿದ್ದರೂ ಪರದೇಶಕ್ಕೆ ಹೋಗಿ ಶಿಕ್ಷಣ ಪಡೆದು ಬಂದುದು ಇವರ ಸಾಹಸಕ್ಕೆ ಸಾಕ್ಷಿ.

ಅಮೇರಿಕೆಗೆ ಹೋದುದು ವೈದ್ಯಕಿಯ ಅಭ್ಯಾಸಕ್ಕಾಗಿ. ಪರೀಕ್ಷೆಯಾದ ಮೇಲೆ ಮಿಂಶನರಿ ಪದ್ಧತಿಯಂತೆ ಋಗ್ಣಾಲಯವೊಂದನ್ನು ತೆರೆಯುವ ಉದ್ದೇಶದಿಂದ. ಪರೀಕ್ಷೆಯಾದ ಮೇಲೆ ಹೊಟ್ಟೆಗೇನು ಗತಿಯೆಂದು ಕೈಕಾಲುಗೆಡುವ ವಿದ್ಯಾರ್ಥಿಗಳೆತ್ತ! ಕೇವಲ ಪರೋಪಕಾರಕ್ಕಾಗಿ ಋಗ್ಣಾಲಯವನ್ನು ಆರಂಭಿಸಬೇಕೆನ್ನುವ ಎದೆಗಾರರೆತ್ತ! ಮುಂದರಿವ ದಿಟ್ಟತನವಿರದಿದ್ದರೆ ಹರಡೀಕರರು ಎಲ್ಲರಂತೆ ಇಂದಿಗೆ ಸಾಮಾನ್ಯ ಡಾಕ್ಟರರೊಬ್ಬರಾಗಿರುತ್ತಿದ್ದರು. ಬಡತನದ ಮೂಲಕ ಅನೇಕ ಜನರ ಸ್ನೇಹವನ್ನು ಸಂಪಾದಿಸಿ, ನಿಷ್ಕಪಟ ಪ್ರೇಮ ಸ್ವಭಾವಗಳಿಂದ ವಿಶ್ವವಿದ್ಯಾಲಯದ ಮುಖ್ಯಾಧಿಕಾರಿಗಳಿಗೆ ಪ್ರಿಯರಾಗಿ, ಇತರ ಚಟುವಟಿಕೆಗಳ ಮೂಲಕ ವಿದ್ಯಾಲಯದ ವತಿಯಿಂದ ಭಾಷಣಕಾರರಾದರು. ಈ ರೀತಿಯಿಂದ ಇವರ ಕಾರ್ಯಕ್ಷೇತ್ರವು ಬೆಳೆಯುತ್ತ ಹಿಂದುಸ್ಥಾನದಿಂದ ಹೋದ ವಿದ್ಯಾರ್ಥಿಗಳ ಸಂಘಕ್ಕೆ ಅಧ್ಯಕ್ಷರಾದರು. ಈ ಕರ್ತೃತ್ವ ಶಕ್ತಿಯ ಫಲವಾಗಿಯೆ ಇವರು ಲಾಲಾಜಿಯವರ ಶಿಷ್ಯರಾದರು. ಆ ಬಳಿಕ ಇವರ ಸರ್ವ ಶಕ್ತಿಗಳು ಸರ್ವತೋಮುಖದಿಂದ ಬೆಳೆದುವು. ಈ ರೀತಿ ತಮ್ಮ ಕಾರ್ಯದಿಂದ ಅಮೇರಿಕೆಯಲ್ಲಿ

ಪ್ರಸಿದ್ಧಿಯನ್ನು ಹೊಂದಿದ್ದಲ್ಲದೆ ಲೋ. ತಿಲಕರೇ ಮೊದಲಾದ ಹಿಂದುಸ್ಥಾನದ ಮುಂದಾಳುಗಳ ಪ್ರೇಮವನ್ನು ಸಂಪಾದಿಸಿದರು.

ಜನ್ಮಭೂಮಿಗೆ ಬಂದ ನಂತರ ಕರ್ನಾಟಕದಲ್ಲಿ ಸ್ವಯಂಸೇವಕರನ್ನು ಸಿದ್ಧ ಪಡಿಸುವ ಕೆಲಸವನ್ನು ಕೈಕೊಂಡರು. ಇವರ ಕರ್ತೃತ್ವಶಕ್ತಿಗೆ ಪುಟಕೊಡುವುದಕ್ಕಾಗಿಯೇ ಏನೊ ಎಂಬಂತೆ ನಾಗಪೂರ ಸತ್ಯಾಗ್ರಹವು ಆರಂಭವಾಯಿತು. ಅಲ್ಲಿಯ ಅನುಭವದಿಂದ ಡಾಕ್ಟರರ ಶಕ್ತಿಯು ಮತ್ತಿಷ್ಟು ಜಾಗ್ರತವಾಗಿ ಸೇವಾದಲಕ್ಕೆ ಜನ್ಮಕೊಟ್ಟಿತು.

ಸೇವಾದಲವು ಆರಂಭವಾದಂದಿನಿಂದ ಇವರ ಕಾರ್ಯಕ್ಷೇತ್ರವು ಇಡೀ ಹಿಂದುಸ್ಥಾನವೇ ಆಯಿತು. ಈ ಕಾರ್ಯದ ಲಾಭದ ಕಲ್ಪನೆಯು ಎಲ್ಲರಿಗೂ ಚೆನ್ನಾಗಿ ಹೊಳೆಯಿತು. ಆದರೆ ಅವರ ಈ ಕಾರ್ಯವನ್ನು ಹೊಗಳಿ ನೆರವಾಗುವ ಜನರಂತೆ, ತೆಗಳಿ, ಮುರಿಬಡಿಯಲು ಟೊಂಕಕಟ್ಟಿ ನಿಂತ ಜನರೂ ಹೆಚ್ಚಾದರು. ಕರ್ನಾಟಕದ ಮುಂದಾಳುಗಳಲ್ಲಿ ಕೌಜಲಿಗಿ ಶ್ರೀನಿವಾಸರಾಯರನ್ನು, ಭಾರತದ ಮುಂದಾಳುಗಳಲ್ಲಿ ಪಂ. ಜವಾಹರಲಾಲರನ್ನುಳಿದು ಬಹುತರ ಎಲ್ಲರೂ ಸೇವಾದಲವೆಂದರೆ ಮೂಗು ಮುರಿಯುವವರೆನ್ನಬಹುದು. ಈ ದ್ವೇಷಾಸೂಯೆಗಳ ಮೂಲಕ ಒಮ್ಮೊಮ್ಮೆ ಎಂತಹ ಕಲ್ಲೆದೆಯವನಿಗಾದರೂ ನಿರಾಶೆಯಾಗುವುದು ಸಹಜ. ಇವರ ಸ್ಥಳದಲ್ಲಿ ಮತ್ತೊಬ್ಬರಾರಾದರೂ ಇದ್ದಿದ್ದರೆ ಈ ಕೆಲಸವು ಎಂದೋ ನಿಂತು ಹೋಗುತಿತ್ತು. ಇಂತಹ ವಿಪರೀತ ಪರಿಸ್ಥಿತಿಯಲ್ಲಿಯೂ ಬಂದದ್ದನ್ನು ಸಹಿಸಿ, ಕಂಡವರನ್ನೆದುರಿಸಿ, ಕಾಂಗ್ರೆಸ್ಸಿನ ಅಂಗಭೂತ ಸಂಸ್ಥೆ ಎಂದೆನಿಸಿಕೊಳ್ಳುವಂತೆ ಘನತೆಗೇರಿಸಿದರು ಸೇವಾದಲವನ್ನು. ತಮ್ಮ ಕೆಲಸಕ್ಕೆ ತಾವೇ ಯೋಗ್ಯರೆಂದು ತಿಳಿಯುವಂತೆ ಮಾಡಿದರು ಮುಂದಾಳುಗಳನ್ನು. 'ಸ್ವಯಂಸೇವಕರಿಗಾಗಿ ಬೇರೆ ಸಂಸ್ಥೆಯೇಕೆ? ಅದಕ್ಕಾಗಿ ಹಣ, ಕಾಲಗಳ ಹರಣವೇಕೆ? ಹಣಕೊಟ್ಟರೆ ಬೇಕಾದಷ್ಟು ಜನರು ಬೇಕಾದಾಗ ಬಂದು ದುಡಿಯುತ್ತಾರೆ' ಎನ್ನುವ ಮುಂದಾಳುಗಳಿಗೆ ತಮ್ಮ ಅವಿಶ್ರಾಂತ ಕಾರ್ಯ, ಅದರ ಮಹತ್ವಪೂರ್ಣವಾದ ಪರಿಣಾಮಗಳನ್ನು ತೋರಿಸಿ 'ಅಹುದು, ಇದು ಅವಶ್ಯವಾದದ್ದು'

ಎಂದೆನಿಸಿದರು ಅವರಿಂದ. ಇಂದಿಗೆ ಉಳಿದೆಲ್ಲ ಸಂಸ್ಥೆಗಳ ಬಂಧನವು ಹೋಗಿದ್ದರೂ ಸೇವಾದಲದ ಕಟ್ಟು ಹಾಗೆಯೇ ಉಳಿದುದನ್ನು ನೋಡಿದರೆ ಈ ಸಂಸ್ಥೆಯ ಕಾರ್ಯದ ಪರಿಣಾಮವು ಸರಕಾರದ ಮೇಲೆಯೂ ಎಷ್ಟಾಗಿರುವುದೆಂಬುದು ಹೊಳೆಯದಿರದು.

ಈ ರೀತಿಯಿಂದ ಹರಡೀಕರರು ಅಂದಿನಿಂದ ಇಂದಿನವರೆಗೆ ತಮ್ಮಲ್ಲಿಯ **ಕರ್ತೃತ್ವಶಕ್ತಿ, ಸ್ವಪ್ರಯತ್ನ, ಮಹತ್ವಾಕಾಂಕ್ಷೆ**ಗಳ ಬಲದಿಂದಲೇ **'ತನ್ನಿಂದ ತಾನಾ'**ಗಿದ್ದಾರೆ.

# ಬ್ರಹ್ಮಚರ್ಯ

ಧಾರವಾಡದಲ್ಲಿ ಡಾಕ್ಟರರ ಮನೆಯಲ್ಲಿ ಒಂದು ಅನಾಥ ಹುಡುಗೆ ಯಿದ್ದ ವಿಷಯು ಹಿಂದೆಯೇ ಹೇಳಿದೆ. ಈ ಹುಡುಗೆಯನ್ನೆ ಹರಡೀಕರ ರಿಗೆ ಕೊಟ್ಟು ಮದುವೆ ಮಾಡಬೇಕೆಂದು ಮನೆಯವರ ಮನದಲ್ಲಿತ್ತು. ದೈವಸಂಕಲ್ಪವಿರದುದರಿಂದ ಈ ಹುಡುಗೆಯುನ್ನು ಬೇರೆ ಕಡೆಗೆ ಕೊಟ್ಟರು.

೧೯೦೫ರ ವಂಗಭಂಗದ ಆಂದೋಲನದ ಕಾರ್ಯವನ್ನು ಕೈಕೊಂಡಾಗ ಶೇವಡೆ ಭಾವುರಾಯರ ಅಳಿಯಂದಿರಾದ ಶ್ರೀ ದೀಕ್ಷಿತರು ಇವರೊಡನೆ ಕೆಲಸ ಮಾಡುತ್ತಿದ್ದರು. ಹರಡೀಕರರೂ ಇವರೂ ಒಂದೇ ವಯಸ್ಸಿನವರಾಗಿ ಅನ್ಯೋನ್ಯರಾಗಿದ್ದರು. ಈ ದೀಕ್ಷಿತರ ಹೆಂಡತಿಯೇ ಶ್ರೀಮತಿ ಶೇವಡೆ ಗಂಗು ತಾಯಿಯವರು. ೧೯೦೮ ರಲ್ಲಿ ದೀಕ್ಷಿತರು ತೀರಿಕೊಂಡರು. ಇವರ ಹೆಂಡತಿಗೆ ಆಗ ೧೨ ವರ್ಷ. ಮನೆಯವರಿಗೆಲ್ಲ ಮುಗಿಲೇ ಹರಿದು ಬಿದ್ದಂತಾಯಿತು. ಮನೆಯವರಾಗಿ ಬಿಟ್ಟಿದ್ದ ಹರಡೀಕರರಿಗೂ ಅಪಾರ ದುಃಖ. ದುರ್ದೈವದಿಂದ ಬಂದ ಅವರ ಬಾಲ ವೈಧವ್ಯಕ್ಕೆ ಡಾಕ್ಟರರು ಬಹಳ ನೊಂದುಕೊಂಡರು. ನೈಸರ್ಗಿಕವಾಗಿ ಪರಾವಲಂಬಿಗಳಾದ ಚಿಕ್ಕ ಚಿಕ್ಕ ಹೆಣ್ಣುಮಕ್ಕಳು ಜೀವನ ಸರ್ವಸ್ವನಾದ ಗಂಡನಿಲ್ಲದೆ ಜನ್ಮವನ್ನು ಕಳೆಯುವದಾದರೆ, ಸ್ವತಂತ್ರನಾದ ಪುರುಷನು ಹೆಂಡತಿಯಿಲ್ಲದೆ ಇರುವುದು ಸಾಧ್ಯವಿಲ್ಲವೆ? ಎಂದು ತಂಗಿಗೆ ಸಮಾನಳಾದ ಗಂಗೂತಾಯಿಯ ಜೀವನವ ನೆನೆದು, ದುಃಖಾತಿರೇಕದಲ್ಲಿ **'ನಾನೂ ಆ-ಜನ್ಮ ಬ್ರಹ್ಮಚರ್ಯದಿಂದಿರುವೆನು'** ಎಂದು ಡಾಕ್ಟರರು ಪ್ರತಿಜ್ಞೆಮಾಡಿದರು. ಪ್ರತಿಜ್ಞೆ ಎಂದರೇನು? ಆ-ಜನ್ಮ ಬ್ರಹ್ಮಚರ್ಯ–

ವೆಂದರೇನು ? ಮೊದಲಾದ ವಿಚಾರಗಳನ್ನು ಮಾಡುವಷ್ಟು ಅವರ ಬುದ್ಧಿಯು ಬೆಳೆದಿರಲಿಲ್ಲ. ಆಗಿನ ವಯಸ್ಸೆಂದರೆ ೧೮-೧೯ ವರ್ಷ.

ಅಮೇರಿಕೆಯಲ್ಲಿರುವಾಗ ಈ ಪ್ರತಿಜ್ಞೆಗೆ ಭಂಗಬರುವ ಸಮಯ ಬಂದಿತ್ತು. ಐಹಿಕ ಸುಖದ ಶಿಖರವನ್ನು ಮುಟ್ಟಿದ ಅಮೇರಿಕೆಯಲ್ಲಿ ಸರ್ವರೀತಿಯಿಂದಲೂ ಜಿತೇಂದ್ರಿಯನಾಗಿರುವುದು ಕಷ್ಟ. ಹಿಂದುಸ್ಥಾನ ದಿಂದ ಹೋದ ಜನರಲ್ಲಿ ಅಮೇರಿಕೆಯ ಹೆಣ್ಣನ್ನು ಮದಿವೆಯಾಗಿ ಮರು ಳುವವರೆ ಹೆಚ್ಚು. ದೈವದಲ್ಲಿಲ್ಲದವರು, ಬ್ರಹ್ಮಚರ್ಯದ ವ್ರತ ಹಿಡಿದವರು, ಈ ಮೋಹಪಾಶದಿಂದ ಉಳಿಯಬೇಕಾದರೆ ಸಾಕುಬೇಕಾಗುವುದು. ಆ- ಜನ್ಮ ಬ್ರಹ್ಮಚರ್ಯದ ಪ್ರತಿಜ್ಞೆಗೈದ ಹರಡೀಕರರಿಗೂ ಕೂಡ ಜಾರುವ ಪ್ರಸಂಗ ಬಂದಿತ್ತು. ಇವರೊಮ್ಮೆ ಓರ್ವ ತರುಣಿಯ ಕೂಡ ಸಲಿಗೆ ಆರಂಭಿಸಿದರು. ಬರಬರುತ್ತ ಸಲಿಗೆಯು ಪ್ರೇಮದಲ್ಲಿ ಪರಿಣಮಿಸುವು ದರಲ್ಲಿತ್ತು. ಇದು ಲಾಲಾಜಿಯವರಿಗೆ ತಿಳಿದ ಕೂಡಲೇ ಅವರು ಇವರ ಮನವನ್ನು ಅದರಿಂದ ತಪ್ಪಿಸಲು ಬಹಳವಾಗಿ ಪ್ರಯತ್ನಿಸಿದರು. ಆದರೆ ಸಾಧ್ಯವಾಗಲಿಲ್ಲ. ಕೊನೆಗೆ 'ಸರಿ ಸರಿ; ಈ ಹುಡುಗ ಕೈ ಬಿಟ್ಟ. ಅವನ ದೈವದಲ್ಲಿದ್ದಂತೆ ಆಗಲಿ ' ಎಂದು ಹರಡೀಕರರ ಕೂಡ ಮಾತನ್ನೆ ಬಿಟ್ಟರು. ಇದನ್ನು ಕಂಡು ಡಾಕ್ಟರರು ಪಶ್ಚಾತ್ತಾಪಪಟ್ಟು ' ಲಾಲಾಜಿ, ನನ್ನಿಂದ ಬಹಳ ತಪ್ಪಾಗಿದೆ. ಅಡ್ಡದಾರಿಗೆ ಬೀಳುತ್ತಿರುವವನನ್ನು ದಾರಿಗೆ ತರ ಲೆತ್ನಿಸುವ ನಿಮ್ಮನ್ನೆ ನಾನು ದ್ವೇಷಿಯೆಂದು ತಿಳಿದುಕೊಂಡೆ. ಇದುವರೆ ಗಾದುದನ್ನು ಕ್ಷಮಿಸಬೇಕು. ಇನ್ನು ಮೇಲೆ ಈ ರೀತಿಯಾಗಿ ನಡೆಯು ವುದಿಲ್ಲ' ಎಂದು ಹೇಳಿಕೊಂಡರು. ಅಡ್ಡದಾರಿಗೆ ಬೀಳುತ್ತಿರುವ ಡಾಕ್ಟ ರರನ್ನು ಉಳಿಸಲು ಅಂಕಲೀಕರರೂ ತಕ್ಕ ಕಾಲಕ್ಕೆ ತುಂಬಾ ಯತ್ನಿಸಿ ದರು. ಇವರಿಬ್ಬರೂ ಇಲ್ಲದಿದ್ದರೆ ಇಷ್ಟರಲ್ಲಿ, ತುಂಬಿದ ತಾರುಣ್ಯದಲ್ಲಿ ಅಮೇರಿಕೆಯಲ್ಲಿದ್ದ ಹರಡೀಕರರು, ಓರ್ವ ಅಮೇರಿಕೆಯ ತರುಣಿಯನ್ನು ಮದುವೆಯಾಗಿ, ಅವಳ ಇಚ್ಛೆಗಾಗಿ ಹಗಲಿರುಳೂ ದುಡಿಯುತ್ತ ಅಮೇರಿ ಕೆಯ ನಾಗರಿಕರಾಗಿರುತ್ತಿದ್ದರು. ಈ ಪ್ರಸಂಗದಿಂದ ಉಳಿಸಿದುದಕ್ಕಾಗಿ ಗುರುಗಳಾದ ಲಾಲಾಜಿಯವರನ್ನೂ ಸ್ನೇಹಿತರಾದ ಅಂಕಲೀಕರರನ್ನೂ

ಇವರು ಈಗಲೂ ಹೃತ್ಪೂರ್ವಕವಾಗಿ ನೆನೆಸುತ್ತಾರೆ. ಆ ಪ್ರಸಂಗವು ನೆನಪಿಗೆ ಬಂದಾಗ ಡಾಕ್ಟರರು ಈಗಲೂ ನಡುಗುವರು, ಅಸಹ್ಯ ಪಟ್ಟು ಕೊಳ್ಳುವರು. ಈ ಗಂಡಾಂತರದಿಂದ ರಕ್ಷಿಸುವುದಕ್ಕಾಗಿ ಲಾಲಾಜಿಯವರ ಸಂಗತಿಯನ್ನು ದೇವರೇ ದಯಪಾಲಿಸಿದನೆಂದೆಂದು ಕೊಳ್ಳುತ್ತಾರೆ.

ಮರಳಿ ಹಿಂದುಸ್ಥಾನಕ್ಕೆ ಬಂದಬಳಿಕ ಹರಡೀಕರರಿಗೆ ಮದಿವೆ ಮಾಡಿಕೊಳ್ಳಲು ಹಲವರು ಕೆಲವು ಸಲ ಹೇಳಿದರು. **'ಇಲ್ಲ ನನ್ನ ಮದುವೆ ನಾಡಿನ ಸಂಗಡ ಆಗಿ ಹೋಗಿದೆ.** ದಯವಿಟ್ಟು ಈ ವಿಷಯವನ್ನು ಇನ್ನೊಮ್ಮೆ ನನಗೆ ಹೇಳಬೇಡಿರಿ. ಮದುವೆಮಾಡಿಕೊಳ್ಳದೆ ಬ್ರಹ್ಮಚರ್ಯದಿಂದಿರಲು ನಾನು ಪ್ರತಿಜ್ಞೆಮಾಡಿದ್ದೇನೆ.' ಎಂದು ಹೇಳುತ್ತಿದ್ದಾರೆ. ಆದರೆ ದೇಹ ಮನಸ್ಸುಗಳೆರಡಕ್ಕೂ ಕಷ್ಟವಾದ ಸಮಯದಲ್ಲಿ 'ಲಗ್ನಮಾಡಿಕೊಂಡಿದ್ದರೆ?' ಎಂಬ ವಿಚಾರ ಮನಸ್ಸಿನಲ್ಲಿ ಬಂದು 'ಆ-ಜನ್ಮ ಬ್ರಹ್ಮಚಾರಿಯಾಗಿರುವೆನೆಂದು ಪ್ರತಿಜ್ಞೆಮಾಡಿ ದೊಡ್ಡ ಮೂರ್ಖತನ ಮಾಡಿದೆನೆಂದು, ಡಾಕ್ಟರರಿಗೆ ಒಂದೊಂದು ಸಲ, ಒಂದು ನಿಮಿಷ ಹೊಯ್ದಾಟವಾಗುತ್ತದೆ. ಆದರೆ ಆ ಹೊಯ್ದಾಟವು ತೋರಿದಂತೆಯೇ ಅಡಗಿಬಿಡುತ್ತದೆ.

ಈ ವರೆಗೂ ಬ್ರಹ್ಮಚಾರಿಗಳಾಗಿರುವ ಹರಡೀಕರರು ಇಷ್ಟೊಂದು ಅಶಕ್ತರಾಗಿರಲು ಕಾರಣವೇನು? ಎಂದು ಹಲವರು ಕೇಳುತ್ತಾರೆ. ಇದಕ್ಕೆ ಅವರ, ಚಿಕ್ಕಂದಿನಿಂದ ಈ ವರೆಗಿನ ಬೇನೆ-ಬೇಸರಿಕೆ, ಕಷ್ಟಪರಂಪರೆ, ದುಡಿತದ ಶ್ರಮವೇ ಕಾರಣವೆಂದು ಹೇಳಬಹುದು. ೧೯೧೧–೧೯೧೨ ರ ಸುಮಾರಿಗೆ ಇವರು ಪ್ಲೇಗಿನಿಂದ ಬಹಳ ದಿನಗಳ ವರೆಗೆ ಹಾಸಿಗೆ ಹಿಡಿದರು. ಇಸಬು ರೋಗವು ಅವರಿಗೆ ಬಹಳ ದುಃಖವನ್ನುಂಟುಮಾಡಿದೆ. ೧೯೩೨ರಲ್ಲಿ ಸಾಬರಮತಿ ಸೆರೆಮನೆಯಲ್ಲಿದ್ದಾಗ ಯಕೃತದಲ್ಲಿ ನೋವು ಆರಂಭವಾಯಿತು. ಈ ರೋಗವನ್ನು ಶಸ್ತ್ರಕ್ರಿಯೆಯಿಂದ ಗುಣಪಡಿಸಬೇಕು. ಅದಕ್ಕಾಗಿ ಹರಡೀಕರರು ವಿಯೆನ್ನಾಕ್ಕೆ ಹೋಗುವುದು ಒಳಿತೆಂದು ಡಾಕ್ಟರರ ಅಭಿಪ್ರಾಯ. ಔಷಧೋಪಚಾರದಿಂದ ಈಗ ಸ್ವಲ್ಪ ಕಡಿಮೆಯಾಗಿದೆ.

ಒಂದೇ ಸವನೇ ಬಹಳ ಹೊತ್ತು ಕುಳಿತುಕೊಳ್ಳುವುದು, ಯಾವಾಗಲು ಪ್ರವಾಸದಲ್ಲಿರುವುದು, ಹೊತ್ತು ಹೊತ್ತಿಗೆ ಅನ್ನನೀರುಗಳಿಲ್ಲದಿರು ವುದು, ಮೂಲವ್ಯಾಧಿಯಂತಹ ಉಷ್ಣ ಜನಕರೋಗಗಳಿಗೆ ಕಾರಣ. ಈ ಮೂಲವ್ಯಾಧಿಯು ಇವರಿಗೆ ಕೆಲವುಟ್ಟಿಗೆ ತೊಂದರೆ ಪಡಿಸಿದೆ.

೧೯೧೯ ರ ವರೆಗೆ ಇವರಿಗೆ ಯಾವ ವ್ಯಸನಗಳೂ ಇರಲಿಲ್ಲ. ಅಡಿಕೆ ಚೂರನ್ನು ಸಹ ಬಾಯಲ್ಲಿ ಹಾಕಿಕೊಳ್ಳುತ್ತಿರಲಿಲ್ಲ. ಅಮೇರಿಕೆಯಲ್ಲಿ ೬ ವರ್ಷ ಕಳೆದ ಬಳಿಕ ಒಮ್ಮೆಲೆ ಹೊಗೆಬತ್ತಿ (ಸಿಗರೇಟು) ಸೇದುವ ಚಟವು ಬಿದ್ದಿತು. ಇದು ಹಾನಿಕಾರಕವೆಂದು ಅವರಿಗೆ ಗೊತ್ತಿದ್ದರೂ ಬಿಡಲು ಸಾಧ್ಯವಾಗಲಿಲ್ಲ. ಸೆರೆಮನೆಯಲ್ಲಿದ್ದಾಗ ಸೇದಲು ಬೇಕಾದಷ್ಟು ಸಿಗುತ್ತಿದ್ದರೂ ಸೇದುವುದಿಲ್ಲವೆಂದು ಬಿಡುತ್ತಾರೆ. ಹೊರಗೆ ಬಂದ ಬಳಿಕ ಸೇದುವುದನ್ನು ಬಿಡಬೇಕೆನ್ನುತ್ತಾರೆ. ಆದರೆ ಈ ವರೆಗೂ ಸೇದು ತ್ತಲೇ ಇದ್ದಾರೆ. ಅಮೇರಿಕೆಯಿಂದ ಬಂದಬಳಿಕ ಅಡಿಕೆ ತಿನ್ನುವುದನ್ನು ಆರಂಭಿಸಿದರು. ಈಗ ಇದು ಚಟವೇ ಆಗಿದೆ. ೧೯೩೬ರಲ್ಲಿ ಕಾನಪುರ ಕಾಂಗ್ರೆಸ್ ಕೆಲಸ ಮಾಡಲು ಹೋದಾಗ ಚಹ ಕುಡಿಯುವುದು ಆರಂಭವಾಯಿತು. ಈ ಮೊದಲು ಡಾಕ್ಟರರಿಗೆ ಚಹವು ಹೇಗಿರುವು ದೆಂದು ಸಹ ಗೊತ್ತಿರಲಿಲ್ಲ. ಈ ಚಟವು ಈಗ ಬೆಳೆದು ಹೆಮ್ಮರವಾಗಿದೆ. ಊಟವನ್ನಾದರೂ ಬಿಟ್ಟಾರು; ಚಹವನ್ನು ಬಿಡಲು ಸಾಧ್ಯವಿಲ್ಲ. ಇವರ ಊಟವು ಮೊದಲೇ ಕಡಿಮೆ. ಚಹದಿಂದ ಇನ್ನೂ ಕಡಿಮೆಯಾಗಿದೆ. ಕೆಲ ಸವು ಬಹಳವಾದಾಗ ಊಟವನ್ನು ಬಿಟ್ಟು ಚಹ ಕುಡಿದೇ ಇರುವು ದುಂಟು. ಈ ಎಲ್ಲ ಚಟಗಳ ಮೂಲಕ ಅವರ ಪ್ರಕೃತಿಯಲ್ಲಿ ವಿಶೇಷ ಪರಿಣಾಮವಾಗಿರಬಹುದು. ಮಹತ್ವದ ಕೆಲಸದ ಮೂಲಕ ಪ್ರಕೃತಿಯು ಕೆಟ್ಟಿದ್ದರೂ ಲಕ್ಷ್ಯಕೊಡದೆ ದುಡಿಯುವುದರಿಂದ ಅವರ ದೇಹದಲ್ಲಿ ಅದರ ಪರಿಣಾಮವು ಬಲವಾಗಿ ಆಗಿದೆ. ತಮಗಾದ ಸಣ್ಣ ಪುಟ್ಟ ಬೇನೆಗಳ ವಿಷಯ ಅವರು ಇತರರಲ್ಲಿ ಹೇಳುವುದೇ ಇಲ್ಲ. 'ಡಾಕ್ಟರರು ಪ್ರಕೃ ತಿಯ ಬಗ್ಗೆ ಎಳ್ಳಷ್ಟೂ ಲಕ್ಷ್ಯಕೊಡದೆ ದುಡಿಯುತ್ತಾರೆಂದು ಪಂ. ಜವಾ ಹರಲಾಲ, ಗಾಂಧಿಯವರಿಗೆ ಹೇಳಿ ಅವರಿಂದ ಡಾಕ್ಟರರಿಗೆ ಬುದ್ಧಿ ಹೇಳಿಸಿ

ದುದೂ ಆಗಿದೆ. ಅವರು ಹೀಗೆ ತಮ್ಮ ಪ್ರಕೃತಿಯನ್ನು ದುರ್ಲಕ್ಷಿಸು ವುದರಿಂದ ಬ್ರಹ್ಮಚಾರಿಗಳಾಗಿದ್ದರೂ ಅಷ್ಟೊಂದು ಸಶಕ್ತರಾಗಿ ರುವುದಿಲ್ಲ.

ಇಷ್ಟಾದರೂ ಬ್ರಹ್ಮಚರ್ಯೆಯ ಫಲವು ಸಿಕ್ಕದೆ ಇಲ್ಲ. ಚಿಕ್ಕಂದಿ ನಲ್ಲಿಯೇ ವ್ಯಾಯಾಮಶಾಲೆಗಳನ್ನು ತೆರೆದು, ವ್ಯಾಯಾಮಮಾಡಿ ಬಡವ ರಾಗಿದ್ದರೂ ದೇಹವನ್ನು ಸಾಕಷ್ಟು ಬಲಪಡಿಸಿದ್ದರು. ಕಾಲೇಜದಲ್ಲಿ ದ್ದಾಗ ವ್ಯಾಯಾಮ ಮಾಡುತ್ತಲಿದ್ದರು. ಇಂದಿಗೆ ಅವರಿಗೆ ೪೫ ವರ್ಷ ಗಳಾಗಿದ್ದರೂ ತರುಣರನ್ನು ನಾಚಿಸುವಂತಹ ಉತ್ಸಾಹ, ಚಪಲತೆ ಮೊದಲಾದ ಗುಣಗಳು ಅವರಲ್ಲಿ ಕಂಗೊಳಿಸುತ್ತವೆ. ಅವರ ಬಿಳಿಗೂದ ಲನ್ನು ಕಂಡರೂ ಸಹ ಅವರಿಗೆ ೪೫ ವರ್ಷವಾಗಿದೆಯೆಂದು ಯಾರೂ ನಂಬುದಿಲ್ಲ. ನಾನು ಸೀನೆನ್ನುವ ತರುಣರು ಸಹ ಇವರ ಕೂಡ ಕೆಲಸ ಮಾಡುವಾಗ ದಣಿಯುತ್ತಾರೆ. ಇವರು ದುಡಿಯುವುದನ್ನು ನೋಡಿದರೆ ನೋಡುವವರಿಗೆ ಬೇಸರ ಬರುತ್ತದೆ. ಸುಮ್ಮನೆ ಕೂಡುವುದೆಂದರೆ ಅವ ರಿಗೆ ಸೇರುವುದಿಲ್ಲ. ಕೆಲಸವಿಲ್ಲದಿರುವಿಕೆಯೇ ಅವರಿಗೆ ಜಾಡ್ಯ. ಪ್ಲೇಗು, ಇಸಬು, ಯಕೃತದಲ್ಲಿಯ ನೋವು, ಮೂಲವ್ಯಾಧಿಗಳ ಪರಿವೆ ಯಿಲ್ಲದೆ ತರುಣರಂತೆ ತಮ್ಮ ಕಾರ್ಯಕ್ರಮಗಳನ್ನು ಯಥಾಪ್ರಕಾರ ಸಾಗಿಸು ತ್ತಿರುವುದು ಬ್ರಹ್ಮಚರ್ಯೆಯ ಫಲವಲ್ಲದೆ ಮತ್ತೇನು ?

# ಹರಡೀಕರರಲ್ಲಿ ಕಂಡುದು, ಕಲಿಯಬೇಕಾದುದು

## ಲೋ. ತಿಲಕರನ್ನು ಕಂಡದ್ದು

ಏಕಲವ್ಯನು ದ್ರೋಣಾಚಾರ್ಯರಿಂದ ಬಾಣಪ್ರಯೋಗವನ್ನು ಕಲಿತಂತೆ ಹರಡೀಕರರು ಲೋಕಮಾನ್ಯರಿಂದ ರಾಜಕಾರಣವನ್ನು ಕಲಿತರು. ಲೋಕಮಾನ್ಯರನ್ನು ಗುರುಗಳಲ್ಲದೆ ದೇವರೆಂದೂ ತಿಳಿದುಕೊಳ್ಳುತ್ತಿದ್ದರು. ಅವರ ದರ್ಶನವಾದುದೂ ಒಂದೇಸಲ. ೧೯೦೬ರಲ್ಲಿ ಹರಡೀಕರರು, ತಾಯಿಯವರು ಅಸ್ವಸ್ಥರಾದುದನ್ನು ಕೇಳಿ, ಕಾಣಲು ಪುಣೆಗೆ ಹೋಗಿದ್ದರು. ಲೋಕಮಾನ್ಯರನ್ನು ಕಾಣಬೇಕೆಂದು ಮೊದಲಿನಿಂದಲೇ ಇವರ ಪ್ರಬಲವಾದ ಇಚ್ಛೆ. ದೇವರ ದರ್ಶನಕ್ಕೆ ಹೋಗುವಂತೆ ಸ್ನಾನ ಮಾಡಿ, ತಮ್ಮಲ್ಲಿದ್ದವುಗಳಲ್ಲಿ ಒಳ್ಳೆ ಬಟ್ಟೆ ತೊಟ್ಟುಕೊಂಡು, ಒಂದುದಿನ ಗಾಯಕವಾಡ ವಾಡೆಗೆ ಹೋದರು. ಬಾಗಿಲಲ್ಲಿ ಒಂದೆಡೆ ನಿಂತ ನೀರಿನಿಂದ ಕೈಕಾಲು ತೊಳೆದುಕೊಂಡು ಮುಂದೆ ಸಾಗುವಷ್ಟರಲ್ಲಿ ಕಾಲು ಜಾರಿ ಬಿದ್ದರು. ಬಟ್ಟೆಗಳೆಲ್ಲ ಹೊಲಸಾದುವು. ಇದು ವರೆಗೆ ಮಾಡಿಕೊಂಡ ಸಿದ್ಧತೆಯೆಲ್ಲ ಹಾಳಾಯಿತಲ್ಲ! ಎಂದು ಅವರಿಗೆ ಬಹುದುಃಖ. ಉಪಾಯವಿಲ್ಲದೆ ಮುಂದೆ ಹೊರಟರು. ಹೋಗಿ ಲೋಕಮಾನ್ಯರನ್ನು ಕಂಡು ಸಾಷ್ಟಾಂಗ ನಮಸ್ಕಾರ ಹಾಕಿದರು. ಇಬ್ಬರಲ್ಲಿಯೂ ೧೦ ನಿಮಿಷಗಳ ವರೆಗೆ ಮಾತುಕತೆ ನಡೆದು 'ಯಾವುದಾದರೊಂದು ಔದ್ಯೋಗಿಕ ಕಾಲೇಜಿನಲ್ಲಿ ಸೇರಿ ಅಭ್ಯಾಸ ಮಾಡೆಂ'ದು ಉಪದೇಶಮಾಡಿ ಲೋಕಮಾನ್ಯರು ಇವರನ್ನು ಬೀಳ್ಕೊಟ್ಟರು. ಆ ಕಾಲದ ವಿಭೂತಿಯನ್ನು ಸಮಕ್ಷಮ ಮಾತಾಡಿಸಿದುದಕ್ಕಾಗಿ ಇವರಿಗೆ ಮಹದಾನಂದವಾಗಿ

ಏನೋ ಒಂದು ದೊಡ್ಡತನವು ಬಂದಂತೆ ಭಾವನೆಯಾಯಿತು. ಮುಂದೆ ಅಮೇರಿಕೆಯಿಂದ ೧೯೨೧ರಲ್ಲಿ ತಿರುಗಿ ಬರುವಷ್ಟರಲ್ಲಿ ಲೋಕಮಾನ್ಯರು ತೀರಿಕೊಂಡಿದ್ದರು. ಹೀಗಾಗಿ ಇವರ ಮೊದಲಿನ ದರ್ಶನವೇ ಕೊನೆಯು ದಾಯಿತು. ಆದರೆ ಹರಡೀಕರರು ಅಮೇರಿಕೆಯಲ್ಲಿದ್ದಾಗ ಲೋಕ ಮಾನ್ಯರು ಪ್ರೇಮಪೂರ್ಣ ಪತ್ರಗಳನ್ನು ಬರೆಯುತಿದ್ದರು.

## ಲಾಲಾಜಿಯವರು

ಲಾಲಾಜಿಯವರು ಹರಡೀಕರರ ಗುರುತ್ವಕ್ಕಷ್ಟೆ ಪಾತ್ರರಾಗಿರದೆ ತಂದೆಯಂತೆಯೂ ಇದ್ದರು. ಅಮೇರಿಕೆಯಲ್ಲಿ ಇಬ್ಬರೂ ಒಂದೇ ಮನೆ ಯಲ್ಲಿರುತ್ತಿದ್ದುದರಿಂದ ಅಡಿಗೆ, ಊಟದ ಕೆಲಸದಲ್ಲಿ ಲಾಲಾಜಿಯವರು ಡಾಕ್ಟರರಿಗೆ ನೆರವಾಗುತ್ತಿದ್ದರು. ಇರುಳು ಊಟವಾದ ಮೇಲೆ ಹರಡೀ ಕರರು ಲಾಲಾಜಿಯವರ ಕಾಲುಗಳನ್ನು ಎಣ್ಣೆಹಚ್ಚಿ ತಿಕ್ಕುತಿದ್ದರು. ಆ ಕಾಲದಲ್ಲಿ ಲಾಲಾಜಿಯವರು ಹಿಂದುಸ್ಥಾನದ ರಾಜಕಾರಣ, ರಾಜಕಾರಣ ಪಟುಗಳ ವಿಷಯ, ಇತರ ದೇಶಗಳ ವಿಷಯಗಳ ಬಗ್ಗೆ ಅನೇಕ ಸಂಗತಿ ಗಳನ್ನು ತಿಳಿಸಿ ಹೇಳುತಿದ್ದರು. ಹಿಂದುಸ್ಥಾನಕ್ಕೆ ಬಂದ ಮೇಲೆ ಇಬ್ಬ ರಲ್ಲಿಯೂ ಪತ್ರವ್ಯವಹಾರವು ನಡೆದೇ ಇತ್ತು. ೧೯೨೭ರಲ್ಲಿ ಲಾಲಾಜಿ ಯವರು ಡಾಕ್ಟರರನ್ನು ತಮ್ಮ ಹತ್ತಿರ ಇದ್ದು ಕೆಲಸ ಮಾಡಲು ಕರೆದಿ ದ್ದರು. ಕೆಲವು ಕಾರಣಗಳ ಮೂಲಕ ಇವರಿಗೆ ಹೋಗಲಾಗಲಿಲ್ಲ.

## ವಿಚಾರಕ್ರಮ; ಕಾರ್ಯಪದ್ಧತಿ

ಹೆಂಡತಿ-ಮಕ್ಕಳು, ಮನೆ-ಮಾರುಗಳ ವಿಷಯ ವಿಚಾರ ಮಾಡು ವದಿರದುದರಿಂದ ಡಾಕ್ಟರರು ೨೪ ತಾಸೂ ತಾವು ಹಿಡಿದ ಕೆಲಸದ ಬಗ್ಗೆ ಯೋಚಿಸುತ್ತಿರುತ್ತಾರೆ. ಆದರಿಂದ ಅವರ ವಿಚಾರಗಳು ಅಷ್ಟು ಆಳವಾ ಗಿರುತ್ತವೆಯಲ್ಲದೆ ಬಹಳ ಕಾರ್ಯವೂ ಅವುಗಳಿಂದ ಆಗುತ್ತದೆ. **ಮೊದಲು ಹೆಚ್ಚು ಕೆಲಸಗಳನ್ನು ಕೈಕೊಳ್ಳಬೇಕು. ಅವುಗಳಲ್ಲಿ ಸ್ವಲ್ಪವಾ ದರೂ ಕೊನೆಗೆ ನೆರವೇರುತ್ತವೆ. ಆರಂಭದಲ್ಲಿಯೇ ಅಲ್ಪ**

**ಪ್ರಮಾಣದಿಂದ ಕೆಲಸವನ್ನು ಕೈಕೊಂಡರೆ ಕೊನೆಗೆ ಏನೂ ಕೆಲಸ ವಾಗುವುದಿಲ್ಲ**ವೆಂದು ಇವರ ಅಭಿಪ್ರಾಯ. ಅದೇ ಮೇರೆಗೆ ಇವರು ಬಗೆಬಗೆಯ ಕೆಲಸಗಳನ್ನು ಬೇರೆ ಬೇರೆ ಸ್ಥಳಗಳಲ್ಲಿ ಆರಂಭಿಸು ತ್ತಾರೆ. ಯಾವುದೊಂದು ಕೆಲಸವು ಕೈಗೂಡಬೇಕಾದರೆ ಹಣಬೇಕು; ಮನಮುಟ್ಟಿ ದುಡಿಯುವ ಜನಬೇಕು. ಇದೆಲ್ಲ ವ್ಯವಸ್ಥೆಯನ್ನು ಇವರು ಅನಾಯಾಸವಾಗಿ ಮಾಡಿಬಿಡುತ್ತಾರೆ. ಹುಡುಗರೊಡನೆ ಹುಡುಗರಾಗಿ ಹೆಣ್ಣು ಮಕ್ಕಳಲ್ಲಿ ಅವರ ಸ್ವಭಾವಕ್ಕನುಸರಿಸಿ, ಇವರು ಕೆಲಸ ಮಾಡುವರು. ಜನರಿಂದ ಕೆಲಸಮಾಡಿಸಿಕೊಳ್ಳುವ ಕೌಶಲವು ಅವರಿಗೆ ಚೆನ್ನಾಗಿ ಗೊತ್ತು. ಕೀಳನಿರಲಿ, ಮೇಲಿನವನಿರಲಿ, ಅವನಿಂದ ಕೆಲಸವಾಗ ಬೇಕೆಂದರೆ ಅವನಲ್ಲಿ ಹೋಗಿ ' I want to make friendship with you ' ( ನಿಮ್ಮ ಗೆಳೆತನ ಮಾಡಬಯಸುವೆನು. ) ಎಂದು ಹೇಳಿ ಅವನಿಂದ ಕೆಲಸ ತೆಗೆದುಕೊಳ್ಳುತ್ತಾರೆ. ಹತ್ತಿರ ಕುಳಿತವರಿಗೆ ಕೆಲಸವಿಲ್ಲವೆಂದು ಕಂಡರೆ ' ಏನರಿ, ದಯಮಾಡಿ ಈ ಕಾಗದಗಳನ್ನಷ್ಟು ಜೋಡಿಸುವಿರಾ ? ಈ ತಿಕೆಟುಗಳನ್ನಷ್ಟು ಹಚ್ಚುತ್ತೀರಾ ? ' ಎಂದು ಅವರನ್ನು ಕೆಲಸಕ್ಕೆ ಹಚ್ಚುತ್ತಾರೆ. ಕಾಕಾ, ಮಾಮಾ, ದಾದಾ, ಎಂದು ಇಲ್ಲದ ಚೇಷ್ಟೆ ಮಾಡುತ್ತ ಸಂಗಡಿಗರನ್ನು ಬೇಸರಿಯುಗೊಡದಂತೆ ಕೆಲಸ ಮಾಡಿಸಿ ಕೊಳ್ಳುತ್ತಾರೆ. ಉಗಿಬಂಡಿಯಲ್ಲಿ ಪ್ರವಾಸಮಾಡುವಾಗಲೂ ಪತ್ರ, ಲೇಖಗಳನ್ನು ಬರೆಯುವುದು ನಡದೇ ಇರುತ್ತದೆ. ಎಡಬಲದಲ್ಲಿದ್ದ ಪ್ರವಾಸಿಕರಿಗೆ ಸಹ ಕೆಲಸ ಕೊಡಲು ಹಿಂದುಮುಂದು ನೋಡುವುದಿಲ್ಲ ಇವರು.

ಇವರ ವಿಚಾರಗಳು ಹೊಸವಾದುದರಿಂದ ಜನರನ್ನು ಸಹಜವಾಗಿ ಆಕರ್ಷಿಸಿ ಬಿಡುತ್ತವೆ. ಇವರು ಸ್ವತಃ ಕೆಲಸಮಾಡುವುದಲ್ಲದೆ ಉಳಿದ ವರಿಗೆ ಹಂಚಿಕೊಟ್ಟು ಮಾಡಿಸಿ, ತಪ್ಪುಗಳನ್ನು ತೋರಿಸಿ, ತಿದ್ದಿ, ಕೆಲಸವು ಮುಗಿಯುವ ವರೆಗೆ ಎದುರಿಗೆ ಕುಳಿತಿರುತ್ತಾರೆ. ಕೆಲಸವು ಬಹಳ ಮಹ ತ್ವದ್ದು, ಬೇಗನೆ ಆಗಬೇಕಾದುದಿದ್ದರೆ, ' ಈ ಕೆಲಸವಾದ ಮೇಲೆಯೆ ನಮಗೂ ನಿಮಗೂ ಊಟ, ' ಎಂದು ಹೇಳಿ ಬಿಡುತ್ತಾರೆ.

ತಮಗೆ ಯಾವ ಕಲೆಗಳು ಬರದಿದ್ದರೂ ಎಲ್ಲ ಕಲೆಗಳ ಸಹಾಯವನ್ನೂ ತೆಗೆದುಕೊಳ್ಳುವರು. ಸಂಗೀತಗಾರರು, ಜಟ್ಟಿಗಳು, ನಾಟಕಕಾರರು, ಬರೆಹಗಾರರು, ವಾಗ್ಮಿಗಳು, ಕವಿಗಳು, ಎಲ್ಲರೂ ತಾವಾಗಿಯೇ ಬಂದು ಡಾಕ್ಟರರಿಗೆ ಮನಃಪೂರ್ವಕವಾಗಿ ನೆರವಾಗುತ್ತಾರೆ. ಜನರಿಲ್ಲದಲ್ಲಿ ಜನರನ್ನು, ಹಣವಿಲ್ಲದಲ್ಲಿ ಹಣವನ್ನು ಹುಟ್ಟಿಸಿ, ಎಲ್ಲರಿಗಿಂತ ಹೆಚ್ಚು ಕೆಲಸವನ್ನು ಮಾಡಿಬಿಡುವದಿವರ ಹುಟ್ಟುಸ್ವಭಾವ.

## ಕೆಟ್ಟದನ್ನು ಸುಧಾರಿಸಲೇಬೇಕು

ಸಾವಿರಾರು ತರುಣ ತರುಣಿಯರು ಹರಡೀಕರರಲ್ಲಿ ದುಡಿದಿದ್ದಾರೆ. ಇವರಲ್ಲಿ ಎಲ್ಲ ತರಹದ ಸ್ವಭಾವದ ಜನರಿರುವರು. ಕೆಲವರಂತೂ ತೀರ ನಿಷ್ಪ್ರಯೋಜಕರೆಂದು ಕಂಡು ಬರುವರು. ಇಂತಹರನ್ನು ಡಾಕ್ಟರರು ಒಮ್ಮೆಲೇ ಕೈಬಿಡುವುದಿಲ್ಲ. 'ಇಗೊ, ಇನ್ನೊಮ್ಮೆ ನಿನಗೆ ಸುಧಾರಿಸಿಕೊಳ್ಳುವ ಸಂಧಿಯನ್ನು ಕೊಡುವೆ' ಎಂದು ನಾಲ್ಕಾರು ಸಲ ಕ್ಷಮಿಸಿದ್ದುಂಟು. ಈ ಕ್ರಮದಿಂದ ಎಷ್ಟೋ ಜನರು ಸುಧಾರಿಸಿರುವರು. '**ಕೆಟ್ಟವರೆಂದು ಜನರನ್ನು ಒಮ್ಮೆಲೇ ಅಟ್ಟಬಾರದು. ಇದರಿಂದ ಅವರು ಮತ್ತಿಷ್ಟು ಕೆಡುವರು. ಸಾಧ್ಯವಿದ್ದಷ್ಟು ಅವಕಾಶಕೊಟ್ಟು ಅವರನ್ನು ದಾರಿಗೆ ತರಬೇಕೆಂ**'ದು ಡಾಕ್ಟರರ ಮತ.

## ಸಿರಿವಂತ-ಬಡವ

ಹರಡೀಕರರು ಇಂದಿನ ವರೆಗೂ ಬಡವರೇ ತಾನೆ? ಇವರ ಗಳಿಕೆ-ಬಳಿಕೆ ನೋಡಿದರೆ ಬಡವರೆಂದೆನ್ನುವುದಾದರೂ ಹೇಗೆ? ಎಂದೆನಿಸುತ್ತದೆ. ನೂರಾರು ಜನರಿಗೆ ಹೊಟ್ಟೆಗೆ ಕೊಡುವರು; ಇವರು ತಂತಿಗಳನ್ನು ಕಳಿಸುವಷ್ಟು ಉಳಿದವರು ಪತ್ರಗಳನ್ನು ಬರೆಯುವುದಿಲ್ಲ; ಇವರ ಪ್ರವಾಸವನ್ನು ಕಂಡವರು ಬೆರಳು ಕಚ್ಚುವರು. 'ನಿಮಗೇಕೆ ಹಣದ ಚಿಂತೆ? ನಾನು ತರಲು ಸಿದ್ಧ; ನೀವು ಕಾರ್ಯ ತೋರಿಸಿರಿ' ಎಂದು ಇವರ

ಧೈರ್ಯ. ಒಂದಾನೊಂದು ಕಾಲದಲ್ಲಿ ಇವರು ಪ್ರತಿ ತಿಂಗಳು ೨೦೦೦ ರೂ.ವೆಚ್ಚ ಮಾಡಿದ್ದುಂಟು. ಇಷ್ಟೊಂದು ಹಣ ಕೂಡಲು ಭಿಕ್ಷಾವೃತ್ತಿಯ ಹೊರತು ಇನ್ನೊಂದು ಮಾರ್ಗವಿಲ್ಲ. ಭಿಕ್ಷೆ ಬೇಡುವುದಾದರೂ ಒಂದು ಕಲೆ ಇದೆ. ಇದರಲ್ಲಿ ಮಾತ್ರ ಡಾಕ್ಟರರು ನುರಿತ ಕಲೆಗಾರರು. ಇವರ ಭಿಕ್ಷೆಗೆ **ಭೀಮ ಭಿಕ್ಷೆ** ಎಂದೆನ್ನಬಹುದು. 'ನನಗೆ ಇಂತಹದೊಂದು ಪದಾರ್ಥವು ಬೇಕಾಗಿದೆ. ಅದು ನಿಮ್ಮಲ್ಲಿದೆ; ಕೊಟ್ಟು ಬಿಡಿರಿ' ಎಂದು ಇವರು ಕೇಳುವ ರೂಢಿ. ಸಿರಿವಂತರಿಂದ ಬಡವನ ವರೆಗೆ ಭಿಕ್ಷೆಯೆತ್ತಿ ೩೦೦೦ ರೂ. ಯಿಂದ ಒಂದು ಕಾಸಿನ ವರೆಗೆ ದೊರಕಿಸಿದ್ದುಂಟು. ದುಡ್ಡೇ ಬೇಕೆಂದೇನೂ ಇಲ್ಲ. ಮೋಟಾರು, ಸೈಕಲ್ಲು, ದೀಪ, ಒಟ್ಟೆ-ಬರೆ, ಗಳನ್ನು ತಂದು ಹಾಕಿ ತಮ್ಮ ಕಾರ್ಯ ಸಾಧಿಸುವರು. ಪ್ರಸಂಗದಲ್ಲಿ ಕೈಸಿಂತರೆ ಸಾಲ ತೆಗೆಯುವರು. ಸಾಧಿಸಿದರೆ ಸಾಲ ತೀರಿಸುವರು; ಇಲ್ಲವಾದರೆ 'ನಿಮ್ಮ ಸಾಲ ರಾಷ್ಟ್ರಕ್ಕೆ ಕಾಣಿಕೆ'ಯೆಂದೆನ್ನುತ್ತಾರೆ. ಈ ರೀತಿಯಿಂದ ಇವರು ಸಾವಿರಾರು ರೂಪಾಯಿಗಳನ್ನು ಗಳಿಸಿ ಬಳಿಸುವರು. ಆದರಿಂದ ಇವರಿಗೆ ಬಡವರೆನ್ನಲು ಬರುವಂತಿಲ್ಲ. ಇನ್ನು ಇದರಲ್ಲಿಯ ಒಂದು ಕಾಸು ಕೂಡ ಇವರ ಅಧಿಕಾರಕ್ಕೊಳಪಡದಿರುವುದರಿಂದ ಸಿರಿವಂತರೆನ್ನುವುದಾದರೂ ಹೇಗೆ? ಆದಕ್ಕಾಗಿ ಇವರಿಗೆ '**ಸಿರಿವಂತ-ಬಡವ**' ರೆಂದರೆ ಚೆನ್ನಾಗಿ ಒಪ್ಪುತ್ತದೆ.

## ಜೀವನದ ಗುರಿ

ಕಂಡವರನ್ನು 'ಏನು ಉದ್ದೇಶವನ್ನಿಟ್ಟುಕೊಂಡು ಕಾರ್ಯ ಮಾಡುತ್ತಿರುವಿ' ಎಂದು ಡಾಕ್ಟರರು ಕೇಳುತ್ತಿರುತ್ತಾರೆ? '**ಉದ್ದೇಶವಿಲ್ಲದೆ ಕಾರ್ಯ ಮಾಡುವವನು, ಕಣ್ಣುಮುಚ್ಚಿಕೊಂಡು ನಡೆಯುವವನು ಒಂದೆ**' ಎಂದಿವರೆನ್ನುವುದು. ಉದ್ದೇಶದಮಾತು ಕತೆಗಳು ಹೊರಟಾಗ '**ಸ್ವತಂತ್ರ ಭಾರತದ ಮೊದಲಿನ ಧ್ವಜವನ್ನು ನಾನು ಹಾರಿಸುವುದೆ ನನ್ನ ಜೀವನದ ಗುರಿ**' ಎಂದು ಅವರು ಹೇಳಿರುವರು.

## ಭಾಷಣಕಲೆ

ಇವರು ಪ್ರಸಿದ್ಧ ಭಾಷಣಕಾರರಲ್ಲ. ಇವರ ಮಾತುಗಳೆಲ್ಲ ಬಹು ಸಾವಕಾಶವಾಗಿ. ಆದರೂ ವಕ್ತೃತ್ವ ಪೀಠದ ಮೇಲೆ ಬಂದು ನಿಂತಕೂಡಲೆ ಅವರ ವ್ಯಕ್ತಿತ್ವವು (Personality) ಜನರ ಮನಸ್ಸಿನಲ್ಲಿ ವಿಶೇಷ ಪರಿಣಾಮಮಾಡುತ್ತದೆ. ಅವರ ಭಾಷಣದಲ್ಲಿ ಸ್ಫೂರ್ತಿ, ಅನುಭವ ಸಿದ್ಧ ಮಾತುಗಳು, ನಾನಾತರಹದ ಬೋಧಪ್ರದ ಹೊಸ ಸಂಗತಿಗಳು ತುಂಬಿರುವುದರಿಂದ, ಅವರ ಪ್ರತಿಯೊಂದು ಶಬ್ದವು ಹೃದಯಸ್ಪರ್ಶಿಯಾಗಿರುತ್ತದೆ.ಇಷ್ಟಾದರೂ ಹರಡೀಕರರು ಮಾತಿಗಿಂತ ಕೃತಿಗೇ ಹೆಚ್ಚು ಮಹತ್ವ ಕೊಡುವರು; ಅದರಲ್ಲಿಯೆ ಅವರು ಮುಂದುವರಿದಿರುವರೆಂದೆನ್ನಲು ಏನೂ ಅಡ್ಡಿ ಇಲ್ಲ.

## ಲೇಖನ

ಕೇಸರೀ ಪತ್ರವನೋದುತ್ತಿರುವಾಗಲೇ ಇವರ ಮರಾಠಿ ಭಾಷೆಯ ಜ್ಞಾನವು ಚೆನ್ನಾಗಿ ಬೆಳೆದಿತ್ತು. ಚಿಕ್ಕಂದಿನಲ್ಲಿ ಹಾಡು, ವೃತ್ತಗಳನ್ನಲ್ಲದೆ ಒಂದು ಕಾದಂಬರಿಯನ್ನು ಬರೆದಿರುವರು. ಈಗ ಮಾತ್ರ ಈ 'ಹಾಡುಗಳನ್ನೆಲ್ಲ ನಾನು ಹೇಗೆ ಬರೆದೆನೋ ನನಗೆ ತಿಳಿಯಲೊಲ್ಲದೆ'ನ್ನುತ್ತಾರೆ, ಸದ್ಯಕ್ಕೆ ಹಾಡು-ಕವಿತೆಗಳ ಸ್ಫೂರ್ತಿಯು ಕನಸು ಮನಸಿನಲ್ಲಿಯೂ ಬರುವುದಿಲ್ಲವಂತೆ.ಅಮೇರಿಕೆಯಿಂದ ಬಂದ ಬಳಿಕ ಸ್ವಯಂಸೇವಕ ಸಂಸ್ಥೆ. ಕಾಂಗ್ರೆಸ್ಸು, ಪ್ರಚಾರ ಕಾರ್ಯ, ಮೊದಲಾದ ವಿಷಯಗಳನ್ನು ಕುರಿತು ಇಂಗ್ಲೀಷಿನಲ್ಲಿಯೇ ಬರೆಯುವರು. ಇವರ ಇಂಗ್ಲೀಷು ಅಮೇರಿಕೆಯ ಶೈಲಿಯದು; ಸ್ಪಷ್ಟ, ಸುಂದರ, ಸುಲಭ. ಇವುಗಳೇ ಇತರ ಭಾಷೆಗಳಲ್ಲಿ ಭಾಷಾಂತರವಾಗುತ್ತಿರುತ್ತವೆ. ಇದನ್ನೆಲ್ಲ ಅವರು ಲಾಲಾಜಿಯವರಿಂದ ಕಲಿತುದು.

## ನಾಟ್ಯಕಲೆ-ಸಂಗೀತ

ಅಮೇರಿಕೆಯಲ್ಲಿದ್ದಾಗ ನಮ್ಮ ಉಡಿಗೆ ತೊಡಿಗೆಗಳಿಂದ, ನಮ್ಮ ಪದ್ಧತಿಯ ಒಂದು ನಾಟಕವನ್ನಾಡಿದರು. ಈ ನಾಟಕವು ಇಂಗ್ಲೀಷಿ

ಸಲ್ಲಿದ್ದಿತು. ಡಾಕ್ಟರರಿಗೆ ಸಂಗೀತವು ಏನೂ ಸೇರುವುದಿಲ್ಲ. ಅರ್ಥವು ಚಿತ್ತಾಕರ್ಷಕವಾಗಿದ್ದರೆ ಗಾಯನದ ಕಡೆಗೆ ಲಕ್ಷ್ಯ. ಅಮೇರಿಕೆಗೆ ಹೋಗುವ ಮೊದಲು ನಾಟಕಗಳನ್ನು ನೋಡುವ ವಿಚಾರ ಕೂಡ ಅವ ರಿಗೆ ಸೇರುತ್ತಿರಲಿಲ್ಲ. ಬೇಸರವುಂಟಾದಾಗ ನಾಟಕಗಳನ್ನು ನೋಡುವ ರೂಢಿ ಅಮೇರಿಕೆಯಲ್ಲಿಯೇ ಆರಂಭ. ಅದೇ ಪರಿಪಾಠವೇ ಇನ್ನೂ ಇದೆ. ಈಗ ನಾಟಕವನ್ನು ನೋಡಲು ಸಹ ವೇಳೆ ಇಲ್ಲದಷ್ಟು ಉದ್ಯೋಗಿಗಳಾ ಗಿರುವುದರಿಂದ, ನಾಟಕಸಂಘಗಳ ಒಡೆಯರ ಆಮಂತ್ರಣಗಳನ್ನು ಸ್ವೀಕ ರಿಸುವುದೇ ಇವರಿಂದ ಆಗುವುದಿಲ್ಲ. ಹೋದರೆ ಗದ್ಯ ಭಾಗವೇ ಇವರಿಗೆ ರುಚಿಸಬೇಕು.

ಲಲಿತಕಲಾದರ್ಶ ನಾಟಕ ಕಂಪನಿಯ ಒಡೆಯರಾದ **ಪೆಂಢಾರ ಕರ**ರು ಒಮ್ಮೆ 'ಡಾಕ್ಟರರೇ, ನೀವು ನಾಟಕ ನೋಡಲು ಬಂದಾಗ ಯಾವಾಗಲೂ ನಾಟಕ ಗೃಹದ ಹೊರಗೇ ಇರುವಿರಲ್ಲ ?' ಎಂದು ಕೇಳಿದರು. ಅದಕ್ಕೆ ಇವರು 'ಹೌದ್ರಿ, ಏನು ಮಾಡಲಿ! ನಿಮ್ಮ ಸಂಗೀತವು ಆರಂಭವಾದ ಕೂಡಲೇ ನನ್ನ ಹೊಟ್ಟೆಯಲ್ಲಿ ಮುಳಮುಳಿಸ ತೊಡಗುತ್ತದೆ. ಅದರಿಂದ ಅದಷ್ಟು ಹೊರಗೆ ಇದ್ದು ಅದರ ಸುಳಿವಿಲ್ಲ ದುದನ್ನು ಕಂಡು ಒಳಗೆ ಬಂದು ಕುಳಿತುಕೊಳ್ಳುತ್ತೇನೆ' ಎಂದು ಹೇಳಿದರು.

## ಪುಸ್ತಕ ವಿದ್ಯೆ

ಸಂಘಟನೆ (organisation) ಪ್ರಚಾರ ಕಾರ್ಯಗಳಲ್ಲಿ ಇವರ ಜ್ಞಾನ ಅಗಾಧವಾಗಿದೆ. ೧೦–೧೫ ವರ್ಷಗಳಿಂದ ವೈದ್ಯಕಿಯ ಅಭ್ಯಾಸ ವಿಲ್ಲದ್ದರಿಂದ ವೈದ್ಯಕಿಯು ಈಗ ಮಲಿನವಾಗಿದೆ. ಸಣ್ಣಪುಟ್ಟ ರೋಗಗಳಿಗೆ ಚಿಕಿತ್ಸೆ ಹೇಳಿದರೂ ದೊಡ್ಡ ರೋಗಗಳಿಗೆ ಬೇರೆ ಡಾಕ್ಟರರನ್ನು ಕರೆಯಿ ಸುತ್ತಾರೆ. ಸಾಹಿತ್ಯದಲ್ಲಿ ಹೆಚ್ಚು ಪ್ರಗತಿಯಾಗುವ ಪ್ರಸಂಗವೇ ಬರ ಲಿಲ್ಲ ಇವರಿಗೆ. ಪರದೇಶಕ್ಕೆ ಹೋಗಿ ಬಂದಂದಿನಿಂದ ಮರಾಠಿ ಭಾಷೆಯ ಪ್ರಗತಿಯೂ ಕಡಿಮೆಯಾಗಿದೆ. "ಯಾರಾದರೂ ಷೆಕ್ಸಪಿಯರ್, ಕಾಲಿ ದಾಸ ಭವಭೂತಿಯರ ಶ್ಲೋಕಗಳನ್ನು ಉದಹರಿಸಿದರೆ ತಿಳಿಯದಿದ್ದರೂ

ತಿಳಿದವರಂತೆ ತಲೆ ಹಾಕುವೆ. ಸಾಹಿತ್ಯದಲ್ಲಿ ಕೊರತೆಯಿರುವುದಕ್ಕೆ ನನಗೆ ಬಹಳೆ ವ್ಯಸನವಾಗುತ್ತದೆಂ' ದು ಹರಡೀಕರರೆನ್ನುವದು.

## ಆಹಾರ

ಡಾಕ್ಟರರು ಅಲ್ಪಾಹಾರಿಗಳು. ಸಿಹಿಗಿಂತ ಉಪ್ಪುಕಾರದಲ್ಲಿ ಪ್ರೀತಿ. ಅನ್ನಕ್ಕಿಂತ ರೊಟ್ಟಿ ಬೇಕು. ಮಜ್ಜಿಗೆ ಅವರ ಊಟದ ಮುಖ್ಯವಸ್ತು. ಆಹಾರ-ವಿಹಾರ ಪದ್ಧತಿಗಳು ಪಾಶ್ಚಾತ್ಯ ಪದ್ಧತಿಗಳನನುಸರಿಸಿವೆ. ಇದಕ್ಕೆ ಹೆಚ್ಚಾಗಿ ಪ್ರಾಯದಲ್ಲಿ ಅವರು ಪರದೇಶಗಳಲ್ಲಿದ್ದುದೇ ಕಾರಣ. ಇಂತಹ ರಲ್ಲಿಯೇ ಊಟಮಾಡಬೇಕೆಂದೇನು ವಿಧಿ-ನಿಷೇಧವಿಲ್ಲ ಇವರಿಗೆ. ಬಡವ ನಿರಲಿ, ಸಿರಿವಂತನಿರಲಿ, ಆಹಾರ ಸ್ವಚ್ಛವಿದ್ದರೆ ಸರಿ. ಊಟದಲ್ಲಿ ಭಿಡೆ-ಭಾರಣಗಳಿಲ್ಲ; ಅಪರಿಚಿತರ ಮನೆಯೆಂದು ಮೌನವಿಲ್ಲ; ಪರಿಚಯವಿದ್ದ ವರಂತೆ ಮಾತಾಡಿ, ಬೇಕಾದುದನ್ನು ಬೇಡಿ ಉಣ್ಣುವ ರೀತಿ; ಬಲಾತ್ಕಾ ರಕ್ಕೆ ಎಡೆಯಿಲ್ಲ. ಹೆಚ್ಚು ಉಣ್ಣುವದೆಂದರೆ ಮೈಗೆ ಮುಳ್ಳು; ಪದಾರ್ಥ ಗಳೆಲ್ಲ ಮಿಶ್ರವಾಗಿರಬಾರದು ಇವರಿಗೆ. ಅಮೇರಿಕೆಯಿಂದ ಬಂದಬಳಿಕ ಶಾಕಾಹಾರಿಗಲ್ಲಿಯೇ ಹೆಚ್ಚು ಇವರ ಒಗೆತನ. ಕಾರಣ ಮಾಂಸಾಹಾರಕ್ಕೆ ಎಡೆಯಿಲ್ಲ. ಪ್ರಸಂಗ ಬಿದ್ದರೆ ಅದೂ ಸಾಗುವದು.

## ಮದ್ಯಪಾನ

ಪರದೇಶಕ್ಕೆ ಹೊರಡುವ ಮೊದಲು ಹರಡೀಕರರು, ಅಂಕಲೀಕರರು **ಗೋಂದಾವಲೆ ಮಹಾರಾಜರನ್ನು** ಕಂಡಿದ್ದರು. ಅವರು ಇವರಿಗೆ "ಅಮೇರಿಕೆಗೆ ಹೋದಮೇಲೆ ನೀವು ಈ ಮೂರು ಮಾತುಗಳನ್ನು ಧ್ಯಾನದಲ್ಲಿಡಬೇಕು. **ಮದ್ಯವನ್ನು ಕುಡಿಯಬಾರದು; ಮಾಂಸಾಹಾರ ಮಾಡಬಾರದು; ಸ್ತ್ರೀಯರನ್ನು ಪಾಪದಿಂದ ನೋಡಬಾರದು.** ಈರೀತಿ ಪ್ರತಿಜ್ಞೆಯನ್ನೇ ಮಾಡಬೇಕು. ಎಂದರೆಯೇ ನೀವು ಸುರಕ್ಷಿತ ಸ್ವದೇಶಕ್ಕೆ ಬರುವಿರಿ. ನೀವು ಮರಳಿದ ಬಳಿಕ ನಿಮ್ಮನ್ನು ನೋಡಲು ನಾನಿರುವದಿಲ್ಲ" ವೆಂದು ಹೇಳಿದ್ದರು. ಅಮೇರಿಕೆಯಲ್ಲಿ ಸ್ತ್ರೀ-

ಮದ್ಯಗಳಿಂದ ದೂರಿರಲು ಮೇಲಿಂದ ಮೇಲೆ ಇವರೆಲ್ಲರಿಗೂ ಎಚ್ಚರಿಕೆ ಕೊಟ್ಟುದು ಮಹಾರಾಜರ ಉಪದೇಶವೇ. ಹಣದ ಕೊರತೆಯು ಮೂಲಕ ಹರಡೀಕರರಿಗೆ ಮಾಂಸಾಹಾರ ಮಾಡಬೇಕಾಯಿತು. ಮದ್ಯಪಾನ ಪ್ರಸಂಗವೊಮ್ಮೆ ಒದಗಲಿತ್ತು ಇವರಿಗೆ. ಒಮ್ಮೆ ಲಾಲಾಜಿಯವರ ಮಿತ್ರ ಳೋರ್ವಳು ಹರಡೀಕರರಿಗೂ ಲಾಲಾಜಿಗೂ ಊಟಕ್ಕೆ ಕರೆದಿದ್ದಳು. ಅಮೇರಿಕೆಯಲ್ಲಿ, ಊಟದ ಪ್ರಾರಂಭಕ್ಕೆ ನಮ್ಮಲ್ಲಿ 'ಆಪೋಶನ' ತಕ್ಕೊಳ್ಳುವಂತೆ,ಬಟ್ಟಲು ಮದ್ಯ ಕುಡಿಯುವರು. ಇದರಂತೆ ಎಲ್ಲರೂ ಕುಡಿದು ಊಟ ಪ್ರಾರಂಭಿಸಿದರು. ಹರಡೀಕರರು ಕುಡಿಯಲಿಲ್ಲ. ಆ ಹೆಣ್ಣುಮಗಳು 'ಏಕೆ ಹರಡೀಕರರೇ ಅದನ್ನು ಕುಡಿಯಲಿಲ್ಲ? ಎಂದಳು. 'ನಾನು ಇದು ವರೆಗೆ ಮದ್ಯ ಸೇವಿಸಿಲ್ಲ'ವೆಂದರು ಡಾಕ್ಟರರು. 'ಛೆ ಇದೆಲ್ಲಿಯ ಹುಚ್ಚು! ಅದರಲ್ಲೇನಿದೆ ಕುಡಿಯಿರೆಂ'ದು ಅವಳ ಆಗ್ರಹ. ಲಾಲಾಜಿಯವರು, ಆ ಹೆಣ್ಣಿಗೆ ಕಾಣದಂತೆ, ಕುಡಿಯಬೇಡೆಂದು ಕಣ್ಣು ಸನ್ನೆಮಾಡಿ ಹೇಳುತ್ತಿದ್ದರು. ಡಾಕ್ಟರರು ಕುಡಿಯಲೊಲ್ಲರು; ಆಕೆ ಬಿಡಲೊಲ್ಲಳು.ಕೊನೆಗೆ ಲಾಲಾಜಿಯವರೇ 'ಅವನು ಇದು ವರೆಗೆ ಕುಡಿದಿಲ್ಲ; ಹಿಂದೂ ದೇಶದಲ್ಲಿ ಕುಡಿತಕ್ಕೆ ನಿಷೇಧವಿದೆ; ಬಲಾತ್ಕಾರ ಪಡಿಸಬೇಡಿರೆ'ಂದ ಮೇಲೆ ಸುಮ್ಮನಾದಳು.

## ಉಡಿಗೆ-ತೊಡಿಗೆ

ಈಗ ೨೪ ಗಂಟೆ ಹರಡೀಕರರಿರುವದು ಸ್ವಯಂಸೇವಕ ಪೋಷಾಕಿನಲ್ಲಿಯೇ. ದೋತರ ಉಟ್ಟುಕೊಳ್ಳುವದೆಂದರೆ 'ಕಪಿಲಾಷಷ್ಠಿಯ ಯೋಗ'ವೇ ಬರಬೇಕು. ಚಿಕ್ಕಂದಿನಲ್ಲಿ, ಅಮೇರಿಕೆಯಿಂದ ಮುಂಬಯಿಗೆ ಬಂದಾಗ, ಅವರು ದೋತರ ಉಟ್ಟುಕೊಂಡ ಚಿತ್ರಗಳಿವೆ. ದೋತರದ ಸಂಪರ್ಕವಿಲ್ಲದ ಇವರು ಅಕಸ್ಮಾತ್ತಾಗಿ ದೋತರವುಟ್ಟುಕೊಂಡರೆ ವಿಚಿತ್ರವಾಗಿ ಕಾಣುವರು.

## ಸ್ವಭಾವ

ಬೆಳೆದ ಮೇಲೆ ಎಳೆತನದಲ್ಲಿಯ ಶಾಂತರು, ತುಂಟರಾಗಿ; ತುಂಟರು,

ಶಾಂತರಾಗಿ, ಕಾಣುವರೆಂದು ಹಿರಿಯರ ಹೇಳಿಕೆ. ಹರಡೀಕರರು ಚಿಕ್ಕವರಿರುವಾಗ ತುಂಟರಿರಲಿಲ್ಲ. ಅಶಕ್ತರಿದ್ದುದರಿಂದ ಶಾಲೆಯಲ್ಲಿ ಹುಡುಗರೊಡನೆ ಗೊಂದಲಕ್ಕೇ ಹೋಗುತ್ತಿರಲಿಲ್ಲ. ಬರಬರುತ್ತ ಹರೆಯದ ಹೊತ್ತಿಗೆ ಶಾಂತಗುಣವು ತುಂಟತನವಾಗಿ ಬೆಳೆಯತೊಡಗಿತು. ಈ ತುಂಟತನವೆಂದರೆ ದೇಶಪ್ರೇಮ; ಸ್ವದೇಶಕ್ಕಾಗಿ ಗೊಂದಲ ಹಾಕುವದು; ಸ್ವಯಂಸೇವಕನಾಗಿ ಕಾರ್ಯಮಾಡುವುದು. ಸೇನಾಪತಿ ಹರಡೀಕರರು ಸ್ಪಷ್ಟ ಮಾತಾಡುವವರು, ಸರಳ ಸ್ವಭಾವದವರು. ಸೈನ್ಯಾಧಿಕಾರಿಯ ಕಠೋರತನ ಮಾತ್ರ ಅವರಲ್ಲಿ ತುಂಬಿದೆ. ಕಾರ್ಯದಲ್ಲಿದ್ದಾಗ ಕೆಲಸಗಾರರ ಅನ್ನ-ನೀರುಗಳ ಲಕ್ಷ್ಯ ಅವರಿಗಿರುವದಿಲ್ಲ; ಮುಗಿದ ಮೇಲೆ ಮಕ್ಕಳಂತೆ ಪರಾಮರಿಸುವರು. ಆಜ್ಞೋಲ್ಲಂಘನೆ ಮಾಡಿದರೆ ಸಿಟ್ಟು ಬೆಂಕಿ; ಇದಕ್ಕಾಗಿ ಶಿಕ್ಷಿಸಲು ನಿಷ್ಕರುಣರು. ಒಟ್ಟಿನಮೇಲೆ ಇವರದು ಉಗ್ರ ಪ್ರಕೃತಿ; ಸಿಟ್ಟೊ ಮೇಲೆ ಮೇಲೆ ಬರುತ್ತದೆ. ಆದರೆ ಅದು ವಿಚಾರೀ ಸಿಟ್ಟು. ಸಾವರಿಸಿಕೊಳ್ಳದಷ್ಟು ಸಿಟ್ಟಿಗೆದ್ದುದ್ದು ಒಮ್ಮೆಯೆ, ೧೯೩೭ರಲ್ಲಿ ಪಂ. ಜವಾಹರಲಾಲರು ಹುಬ್ಬಳ್ಳಿಗೆ ಬಂದಾಗ ಮುಂದಿನ ಅವರ ಪ್ರವಾಸವು ನಿಯಮಿಸಿದ ಕಾರ್ಯಕ್ರಮದಂತೆ ಸರಿಯಾಗಿ ನೆರವೇರದಿದ್ದಾಗ.

ತಾವು ಸರಳರಿರುವುದರಿಂದ ತಮ್ಮಂತೆ ಪರರ ಬಗೆವುದು ಬಹಳ. ತಮ್ಮ ಕೆಲಸಗಾರರೂ ಅನೇಕರಿರುವದರಿಂದ ಅವರನ್ನು ನಂಬಲೇ ಬೇಕಾಗುತ್ತದೆ ಇವರಿಗೆ. ತಾವು ಕೂಡಿಸಿದ ಹಣವನ್ನು ಕೂಡ ಎರಡನೆಯವರಲ್ಲಿಟ್ಟು, ತಮ್ಮ ವೆಚ್ಚಕ್ಕಾಗಿ ಅವರಿಂದ ತಕ್ಕೊಳ್ಳುವ ನಂಬುಗೆ ಸ್ವಭಾವ ಇವರದು. ಇವರ ಹುಚ್ಚುನಂಬುಗೆ ಉಪಯೋಗಮಾಡಿಕೊಳ್ಳುವ ಜನರೂ ಇದ್ದಾರೆ. ಒಮ್ಮೆ ೧೯೩೨ನೇ ಇಸ್ವಿಯಲ್ಲಿ ಸೇವಾದಲದ ಕಾರ್ಯಕರ್ತನೊಬ್ಬನು ಎರಡನೆಯವರಿಗೆ ಮುಟ್ಟಿಸಲು ಕೊಟ್ಟ ೨೦೦೦ ರೂ. ತಕ್ಕೊಂಡು ಓಡಿಹೋಗಿಬಿಟ್ಟ.

ಡಾಕ್ಟರರು ತುಂಬಾ ಸ್ವತಂತ್ರ ವಿಚಾರಿಗಳು. ಒಬ್ಬರನ್ನು ಕೇಳುವದು, ತಮ್ಮ ಕಾರ್ಯದಲ್ಲಿ ಯಾರಾದರೂ ಕೈ ಹಾಕುವದು ಅವರಿಗೆ ಸೇರಿಕೆಯಿಲ್ಲ. ತೆಳ್ಳಗಿನ ದೇಹ, ಅಲ್ಪಾಹಾರ, ನಿಯಮಿತತನಗಳು ಇವರ ಚಪಲತೆಗೆ ಕಾರಣ. ಕೂತಲ್ಲಿ ಕೂಡದೆ, ನಿಂತಲ್ಲಿ ನಿಲ್ಲದೆ ಕಾರ್ಯಮಾಡು

ವದಿವರ ಸ್ವಭಾವ; ಗಂಟೆ–ನಿಮಿಷಗಳಿಗೆ ಸರಿಯಾಗಿ ಕೆಲಸ ಜರುಗಿಸುವದಿವರ ವೈಶಿಷ್ಟ್ಯ.

ಸಣ್ಣಮಕ್ಕಳೆಂದರೆ ಇವರಿಗೆ ಬಹು ಪ್ರೀತಿ. ಕೂಸುಗಳನ್ನಾಡಿಸುವುದು ಅವರ ಸ್ವಭಾವವಾಗಿ ಬಿಟ್ಟಿದೆ. ೧೯೩೭ರಲ್ಲಿ ಶೇವಡೆ ರಾಮರಾಯರ ಹೆಂಡತಿ ಒಂದುವರ್ಷದ ಗಂಡುಕೂಸನ್ನು ಬಿಟ್ಟು ಪರಂಧಾಮಕ್ಕೆ ತೆರಳಿದರು. ಮನೆಯವರ ಜತೆಗೆ ಡಾಕ್ಟರರೂ ಆ ಕೂಸಿನ ಲಾಲನೆ–ಪಾಲನೆ ಮಾಡಿದರು. ಕಾರ್ಯದಲ್ಲಿದ್ದಾಗ ಸಹ ಇವರ ತೊಡೆಯಮೇಲೆಯೇ ಇರುತ್ತಿತ್ತು ಆ ಕೂಸು. ಹೆಚ್ಚಾಗಿ ವಿನೋದಿಗಳಿವರು. ಗಂಡು–ಹೆಣ್ಣು ಹುಡುಗರು, ಮನೆಯವರಿರಲಿ, ಪರಕೀಯರಿರಲಿ,ಏನೂ ಸಂಕೋಚವಿಲ್ಲದೆ ನಗೆಯಾಡುವರವರೊಡನೆ.

## ಮಾತೃಪ್ರೇಮ

ಡಾಕ್ಟರರ ತಾಯಿಯವರು ಧನದಿಂದ ಬಡವರಾದರೂ ಮನದಿಂದ ದೊಡ್ಡವರು, ಪರೋಪಕಾರಿಗಳು, ದಯೆಯುಳ್ಳವರು, ಪ್ರೇಮಳರು. ತಾಯಿಯವರ ಗುಣಗಳೇ ಇವರಲ್ಲಿಳಿದು, ಬೆಳೆದು,ಬೆಟ್ಟವಾಗಿ ನಿಂತಿವೆ. ತಾಯಿಯ ವಿಯೋಗವಾದ ಮೇಲೆ ಈಗ ಇವರಿಗೆ ಮಾತೃಪ್ರೇಮದ ಹಂಬಲಿಕೆ. ೧೯೦೬ರಲ್ಲಿ ತಾಯಿಯವರು ಕಾಯಿಲೆಯಿಂದ ಹಾಸಿಗೆ ಹಿಡಿದಾಗ,ಕಾಣಲು ಪುಣೆಗೆ ಹೋಗಿದ್ದರು. ಇವರನ್ನು ಕಂಡು ತಾಯಿಯು ಅಪ್ಪಿ ಮುದ್ದಾಡಿದಳು. ಆಗ ಇವರಿಗೆ ಮಾತೃಪ್ರೇಮದ ಕಲ್ಪನೆಯೇ ಇರಲಿಲ್ಲ. ಈಗ "ನನ್ನ ತಾಯಿಯು ಕಷ್ಟದಲ್ಲಿಯೇ ಕೊನೆಗಂಡಳಲ್ಲ! ಅವಳ ಸೇವೆ ಮಾಡುವ ಭಾಗ್ಯ ಬರಲಿಲ್ಲ" ವೆಂದು ಮಿಡುಕುತ್ತಿರುತ್ತಾರೆ.

## ನಡತೆ

ಪುರುಷರಲ್ಲಿಯ ಸಂಘಟನೆಯಂತೆಯೇ ಡಾಕ್ಟರರು ಸ್ತ್ರೀಯರಲ್ಲಿಯೂ ಜಾಗ್ರತೆಯ ಮಾಡಲು ತವಕಪಡುವರು. ಅಮೇರಿಕೆಯಂತಹ ಮುಂದರಿದ ರಾಷ್ಟ್ರಗಳಲ್ಲಿಯ ಅನುಭವ,ಸರಳ ಸ್ವಭಾವಗಳು ಅವರನ್ನು

ಸ್ತ್ರೀಯರಲ್ಲಿ ಸೇರಿ, ಸಂಕೋಚವಿಲ್ಲದೆ ಕಾರ್ಯಮಾಡಲು, ಮಾಡಿಸಲು ಅಣಿಮಾಡಿವೆ. ಭಗಿನೀಮಂಡಲ ಮೊದಲಾದವುಗಳ ದ್ವಾರಾ ಇವರು ಸ್ತ್ರೀಯರ ಸಂಘಟನೆ ಮಾಡುತ್ತಿರುವದು ಒಳ್ಳೆಯದೆಂದು ಕೆಲವರಿಗೆನಿಸಿದರೂ, ಹಲವರು ಇವರ ಈ ಕರ್ತೃತ್ವಕ್ಕೆ ಮೂಗು ಮುರಿಯದಿಲ್ಲ. ಸಾಮಾನ್ಯ ಜನರೊಂದೆಡೆಗಿರಲಿ,ಎಷ್ಟೋ ಮುಂದಾಳುಗಳೇ ಈ ವಿಷಯಕ್ಕೆ ಡಾಕ್ಟರರನ್ನು ಟೀಕಿಸಿರುವರು. ಇದೆಲ್ಲವನ್ನೂ ಸಹಿಸಿಕೊಂಡು, ಹುರುಳಿಲ್ಲದ ಜನಾಪವಾದಕ್ಕೆ ಕಿವಿಗೊಡದೆ, ಹರಡೀಕರರು ಹೆಣ್ಣುಮಕ್ಕಳ ಪ್ರಾಶಸ್ತ್ಯಕ್ಕೆ ಪ್ರಯತ್ನ ಪಡುತ್ತಲೇ ಇರುವರು. ಶುದ್ಧಾಶುದ್ಧ ನಡತೆಗೆ ದೂರಿನಿಂದ ಸಂದೇಹಪಟ್ಟು ಉಪಯೋಗವಿಲ್ಲ; ಹತ್ತಿರಿದ್ದು ಪರೀಕ್ಷಿಸಬೇಕು ಇವರ ನಡೆನುಡಿಗಳನ್ನು. ದುರುದ್ದೇಶದಿಂದ ಕೂಡಿದವನಿಗೆ ಜನ-ಮನಗಳ ಭಯ, ಸದುದ್ದೇಶದವನಿಗೇತರ ಭಯ ?

## ಸ್ವಾರ್ಥತ್ಯಾಗ

'ಡಾಕ್ಟರ್' ಪದವಿಯ ಪಡೆದು, ಪರದೇಶವನ್ನು ಕಂಡು, ಲಾಲಾಜಿಯ ಜೊತೆಗೆ ಸೇರದೆ, ಶಿಕ್ಷಣ ಮುಗಿಸಿಕೊಂಡು, ಸ್ವದೇಶಕ್ಕೆ ಬಂದು ತಮ್ಮ ವ್ಯವಸಾಯ ಸಾಗಿಸಿದ್ದರೆ, ಇಂದಿಗೆ ಹರಡೀಕರರು ಹಣವಂತರಾಗಿರುತ್ತಿದ್ದರು; ಮದುವೆಯಾಗಿದ್ದರೆ ತನ್ನ ಹೆಂಡತಿ ಮಕ್ಕಳು ಮನೆಯೆಂಬ ಆನಂದದಲ್ಲಿಯಾದರೂ ಸುಖಜೀವನವ ಸಾಗಿಸುತ್ತಿದ್ದರು. ಆದರೆ ಧನದಾಶೆ ದೂರಿರಿಸಿದರು; ಮನೆಯಾಶೆ ಮರೆತು ಬಿಟ್ಟರು; ಇಂದಿಗೆ ನನ್ನವರೆನ್ನುವವರಾರೂ ಇಲ್ಲ ಈ ಜಗದೊಳವರಿಗೆ. ಇಬ್ಬರು ಅಣ್ಣಂದಿರು, ಸಾಕಿ ಸಲುಹಿದ ಬಳಗದವರು, ಪ್ರಾಣಕೊಡುವ ಅನುಯಾಯಿಗಳು, ಹೋದ ಹೋದಲ್ಲಿ, ದೇಶದಲ್ಲೆಲ್ಲ ಅವರ ಹಿತಚಿಂತಕರೂ ಇದಾರೆ. ಆದರೆ ಇವರೆಲ್ಲರ ಪ್ರೀತಿಯ ರೀತಿ ಬೇರೆ. ಐಹಿಕ ದೃಷ್ಟಿಯಿಂದ ಆ ನಿಷ್ಕಾಮ, ಪವಿತ್ರ, ಅವರ್ಣನೀಯ, ಅನಿರ್ವಚನೀಯ,ಕೇವಲ ಅನುಭವಿಸಿಯೇ ತಿಳಿಯುವಂತಹ ಹೆಂಡತಿಯ ಪ್ರೇಮದ ಮುಂದೆ ಉಳಿದವರ ಪ್ರೇಮ ಹೇಗೆನಿಸಬಹುದು? ಇದಕ್ಕಾಗಿಯೇ ಡಾಕ್ಟರರಿ

ಗೊಮ್ಮೆ ಮನದಲ್ಲಿಯೇ ಮಿಡುಕು ಮೈದೋರುತ್ತಿರುತ್ತದೆಂಬ ಮಾತು ಹಿಂದೆಯೇ ಬಂದಿದೆ.

ಮಾನವಪ್ರಾಣಿಯು ಬಾಳುತ್ತಿರುವುದು ಯಾವುದೊಂದು ಆಶೆಗೆ-ಆನಂದಕ್ಕೆ ಅಂಟಿಕೊಂಡು. ಇಲ್ಲವಾದರೆ ಅವನಿಗೆ ಉತ್ಸಾಹವಿಲ್ಲ-ಚೈತನ್ಯವಿಲ್ಲ. ಐಹಿಕಸುಖದ ಆಶೆ-ಆನಂದಗಳಿಲ್ಲದ ಹರಡೀಕರರೊ ಉತ್ಸಾಹ-ಚೈತನ್ಯಗಳ ಮೂರ್ತಿಯಾಗಿರುವರು. ಇವರ ಆಶೆ- ಆನಂದ ಗಳೇನಿರಬಹುದು? **ಹಿಂದುಸ್ಥಾನವು ಸ್ವಾತಂತ್ರ್ಯ ಸುಖ ಪಡೆಯು ಲೆಂಬುದೇ ಇವರಾಶೆ; ದೇಶದ ಸೇವೆಯಲ್ಲಿ ನಿರತರಾಗಿರುವದೇ ಇವರಿಗಾನಂದ.** ಸರ್ವಸುಖಗಳಿಗೆ ತಿಲಾಂಜಲಿಯು ಕೊಟ್ಟು,ಬಿಳಿ ಬಟ್ಟೆ ಯುನುಟ್ಟು, ಭಾರತದ ಸ್ವಾತಂತ್ರ್ಯಕ್ಕಾಗಿ ಸಜ್ಜಾಗಿರುವ ಸನ್ಯಾಸಿಗಳ ವರು. ಈ ಉದಾತ್ತ ಶ್ರೇಷ್ಠ ಜೀವನದ ಮುಂದೆ ಆ ಹಣದ ಗೋಳು, ಮದುವೆಯ ಬಾಳು ಎಷ್ಟರವು?

## ಸಾದಾ ಜೀವನ

**'ಸಾದಾ ಜೀವನ ಉಚ್ಚ ವಿಚಾರ'** ದವರಿವರು.ಸ್ವಯಂಸೇವಕನ ಪೋಷಾಕಿನಲ್ಲಿಯೇ ಇರುವುದರಿಂದ ಇವರ ಬಟ್ಟೆ ಬರೆಗಳಿಗೆ ಹೆಚ್ಚು ವೆಚ್ಚವಿಲ್ಲ. ಸ್ವಚ್ಛವಿಟ್ಟು, ಶಿಸ್ತಿನಿಂದುಪಯೋಗಿಸುವದರಿಂದ ಸಾದಾ ಅರಿವೆಗಳಿದ್ದರೂ ಚೆಂದವಾಗಿಯೇ ಕಾಣುತ್ತಿವೆ. ಆಹಾರವೋ ಬೇಕಾ ದುದು ಬರಲಿ, ಸ್ವಚ್ಛವಿದ್ದರಾಯಿತು. ಪ್ರವಾಸವು ಮೂರನೇ ವರ್ಗದ ಲ್ಲಿಯೇ ಹೆಚ್ಚು; ಕೆಲವು ಸಲ ಇಂಟರವರ್ಗ; ಕ್ವಚಿತ್ತಾಗಿ ಎರಡನೇ ವರ್ಗ ದಲ್ಲಿ.

## ಸ್ವಂತ ವೆಚ್ಚ

ಹುಬ್ಬಳ್ಳಿಯಲ್ಲಿರುವಾಗ ಶೇವಡೆಯವರ ಮನೆಯಲ್ಲಿಯೇ ಇರು ವರು. ಪ್ರವಾಸದಲ್ಲಿರುವಾಗ, ಮಾಡುವುದು ಸಾರ್ವಜನಿಕ ಕಾರ್ಯ; ಇದರ ವೆಚ್ಚವೂ ಸಾರ್ವಜನಿಕ ಹಣದಿಂದಲೇ. ಚಿಕ್ಕಪುಟ್ಟ ವೆಚ್ಚ, ಅರಿವೆ-

ಅಂಚಡಿಗಳನ್ನೊಮ್ಮೊಮ್ಮೆ ಶೀಪಡೆಯುವರ ಮನೆಯುವರೇ ಕೊಡುವರು. ಒಟ್ಟಿನಲ್ಲಿ ಹರಡೀಕರರಿಗೆ **ಮನೆಯ ಜೀವನವೇ** ಇಲ್ಲವೆನ್ನಬಹುದು. ಸಂಪೂರ್ಣವಾಗಿ **ಸಾರ್ವಜನಿಕ ವ್ಯಕ್ತಿ**ಗಳವರು. ೨೪ ಗಂಟೆ ದೇಶ ಸೇವೆಯಲ್ಲಿದ್ದವರಿಗೆ ಇದಕ್ಕೂ ಹೆಚ್ಚಿನ ವೆಚ್ಚವೇನಿದೆ?

## ಜನಮನ

ಹರಡೀಕರರೆಂದರೆ **'ಶಿಸ್ತಿ'ನ ಮೂರ್ತಿ.** ಶಿಸ್ತನ್ನು ಜನರಿಗೆ ಕಲಿಸುವದಕ್ಕಾಗಿಯೇ ಅವರು ಟೊಂಕಕಟ್ಟಿ ನಿಂತಿರುವುದು. ಇದಕ್ಕಾಗಿಯೇ ಇವರು ದೇಶದೇಶಗಳಲ್ಲೆಲ್ಲ ಹೆಸರುವಾಸಿಗಳಾಗಿದಾರೆ. ಹರಡೀಕರರು ಆಗಮಿಸುವರೆಂದರೆ ತೀರಿತು; ಜನರು ಶ್ರಮಪಟ್ಟು, ಜಾಗ್ರತೆಯಿಂದ, ಶಿಸ್ತಿಗೆ ಭಂಗಬರದಂತೆ ನೋಡಿಕೊಳ್ಳುವರು. ಇಷ್ಟಾದರೂ 'ಏನೆನ್ನುವರೋ, ಎಲ್ಲಿ ತಪ್ಪು ಕಂಡು ಹಿಡಿವರೋ' ಎಂದು ಗಾಬರಿ. ಅವರನ್ನು ನೋಡದವರು, ಹೆಸರು ಕೇಳಿದ ಮಾತ್ರಕ್ಕೆ ಕಾರ್ಯಕ್ಕಾಗಿ ಉತ್ಸಾಹಗೊಳ್ಳುವರು–ಶಿಸ್ತಿಗಾಗಿ ಭಯಪಡುವರು.

ಒಮ್ಮೆ ಆಸಾಮಪ್ರಾಂತದ **ಗೋಹಾಟಿ** ಕಾಂಗ್ರೆಸ್ಸನ್ನು ಮುಗಿಸಿಕೊಂಡು ಡಾಕ್ಟರರು,ಅವರ ಅನುಯಾಯಿಗಳು ಮರಳಿ ಕರ್ನಾಟಕಕ್ಕೆ ಹೊರಟಿದ್ದರು. ಇವರು ಕುಳಿತ ಮೂರನೇ ವರ್ಗದ ಡಬ್ಬಿಯಲ್ಲಿಯೇ ಕೆಲವು ಬಂಗಾಲೀ ಪ್ರಯಾಣಿಕರು "ಕೊನೆಯ ದಿನ ಕಾಂಗ್ರೆಸ್ಸಿನ ಕೆಲಸವನ್ನು ಯಶಸ್ವಿಯನ್ನಾಗಿ ಮಾಡಿದ ಜನರಿಗೆ, ಅಭಿನಂದನೆಗಳನ್ನು ಸಲ್ಲಿಸುವಾಗ, ಹಿಂದುಸ್ಥಾನೀ ಸೇವಾದಲದ ಸ್ವಯಂಸೇವಕರಿಗೂ ಅವರ ಮುಂದಾಳುಗಳಾದ ಡಾ. ಹರಡೀಕರರಿಗೂ ವಿಶಿಷ್ಟ ರೀತಿಯಿಂದ ಅಭಿನಂದಿಸಬೇಕಾಗಿತ್ತೆಂ'ದು ಮಾತನಾಡುತಿದ್ದರು. ಡಾಕ್ಟರರು ಅಲ್ಲಿಯೇ ಇದ್ದುದರಿಂದ ಆ ಮಾತನ್ನೆಲ್ಲ ಕೇಳುವ ತನಕ ಕೇಳಿ, ತಾವೂ ಆ ಚರ್ಚೆಯಲ್ಲಿ ಸೇರಿ, "ಅದರಲ್ಲೇನಿದೆ? ಅಭಿನಂದನೆ ಮಾಡಿದರೇನು? ಬಿಟ್ಟರೇನು? ನಿಜವಾದ ಕೆಲಸಗಾರರು ಅಭಿನಂದನೆಯ ಆಶೆ ಮಾಡುವದಿಲ್ಲೆಂ"ದರು " ಈ ಮಾತನ್ನು ಡಾ. ಹರಡೀಕರರಾಡಬೇಕು. ಉಳಿದವ

ರೆಂದರೆ ಚೆಂದ ಕಾಣವು. ಅಭಿನಂದಿಸುವದೇ ಉಳಿದವರ ಕರ್ತವ್ಯ ವೆಂ''ದರು ಆ ಬಂಗಾಲಿಗಳು. 'ನಾನೇ ಡಾ. ಹರಡೀಕರ'ನೆಂದು ಹೇಳಿ ಬಿಟ್ಟರು ಡಾಕ್ಟರರು. ಆಗ ಅವರೆಲ್ಲರ ಸ್ಥಿತಿಯು ನೋಡುವಂತಹದಾ ಗಿತ್ತು. ಬಹಳವೇನು ? ಭಯದಿಂದ ಬೆವರಿಟ್ಟರೆಲ್ಲರೂ. ಇಂತಹ ಪ್ರಸಂ ಗಗಳು ಎಷ್ಟೋ ಸಿಕ್ಕುವವು ಡಾಕ್ಟರರ ಜೀವನದಲ್ಲಿ. ಇಂತಿದೆ ಡಾಕ್ಟರರ ವಿಷಯಕ್ಕೆ ಜನಮನ.

## ಕಲಿಯಬೇಕಾದುದು

ಇದು ವರೆಗೆ ಹರಡೀಕರರಲ್ಲಿ ಕಂಡುದರ ಜೊತೆಗೆ ಕಲಿಯಬೇಕಾ ದುದನ್ನು ಹೇಳಿಬಿಟ್ಟರೂ, ಹೇಳಿದಷ್ಟು ಕಡಿಮೆಯೇ ಇದೆ.

ಡಾಕ್ಟರರ ಕಡೆಗೆ, ದೇಶಸೇವೆಗೆಂದು ಸ್ತ್ರೀ ಪುರುಷರು ಬಹಳವಾಗಿ ಬರುವರು. ಇದಕ್ಕೆ ಕಾರಣ ಇವರ ನಿರ್ಮಲಾಂತಃಕರುಣ, ಹಚ್ಚಿಕೊಳ್ಳುವ ಉದಾರಗುಣ, ಕಳಕಳಿಯ ಬೋಧನ. ತಮ್ಮ ಅನುಯಾಯಿಗಳಿಗೆ 'ನಾಳಿನ ಮುಂದಾಳುಗಳು ನೀವು; ಕಣ್ಣು ಮುಚ್ಚಿಕೊಂಡು, ಹೇಳಿದಷ್ಟು ಕಾರ್ಯ ಮಾಡುತ್ತ ಹೋದರೆ ಮೊಟ್ಟೆಗಾರರ ಯೋಗ್ಯತೆಯ ಏರ ಲಾರಿರಿ; ಕೊನೆಯವರೆಗೆ ಸ್ವಯಂಸೇವಕರಾಗಿಯೇ ನೀವಿರಬೇಕಾದೀತು; ಕಣ್ಣುಕಿವಿಗಳ ತೆರೆದಿಡಿರಿ; ಎಡಬಲಕ್ಕೆ ನೋಡುತ್ತಿರಿ, ಕೇಳುತ್ತಿರಿ; ಅದ ರಿಂದ ಪಾಠಕಲಿತು, ಜ್ಞಾನ ಸಂಪಾದಿಸಿರಿ, ಅನುಭವ ಪಡೆಯಿರೆಂ'ದು ಮೇಲೆ ಮೇಲೆ ಹೃತ್ಪೂರ್ವಕವಾಗಿ ಹೇಳುವರಿವರು. ಪ್ರತಿಯೊಂದು ಕಾರ್ಯದಲ್ಲಿ ತಮ್ಮವರನ್ನು ನಿಪುಣರನ್ನಾಗಿ ಮಾಡಿ ದೇಶಕಾರ್ಯಕ್ಕೆ ಸಮರ್ಥರನ್ನಾಗಿ ಮಾಡುವರು.

'ತನ್ನಂತೆ ಪರರ ಬಗೆದೊಡೆ' ತತ್ವನಿಷ್ಠರು ಡಾಕ್ಟರರು. ತಮ್ಮದ ಕ್ಕಿಂತ ಅನುಯಾಯಿಗಳ ತೊಂದರೆಗೆ ಮೊದಲು ಲಕ್ಷ್ಯ ಇವರದು. ೧೯೩೧ ರಲ್ಲಿ ಹುಬ್ಬಳ್ಳಿಯ ಸೇವಾದಲ ಕಚೇರಿಯಲ್ಲಿ ಓರ್ವ ಸ್ವಯಂಸೇವಕನು ಮಾರಿಕಾ ಬೇನೆಯಿಂದ ಮೃತಪಟ್ಟ. ಆ ಕಾಲಕ್ಕೆ ಹರಡೀಕರರು ತಮ್ಮ ಎಲ್ಲ ಕಾರ್ಯಕ್ರಮಗಳನ್ನು ಬದಿಗಿರಿಸಿ, ೨-೩ ದಿನಗಳ ವರೆಗೆಹಗಲಿರುಳೂ

ಅವನ ಹತ್ತಿರ ಕುಳಿತು ಆರೈಕೆ ಮಾಡಿದರು. ತಾವು ಮಾಡದ ಕೆಲಸವನ್ನು ಪರರಿಗೆ ಹೇಳರು; ಮಾಡುವ ಕೆಲಸವನ್ನು ತಾವೇ ಪ್ರಾರಂಭಿಸುವರು; ನೋಡಿದವರು ತಾವಾಗಿಯೇ ಅವರನ್ನು ಬಿಡಿಸಿ ಮಾಡುವರು.

'ಸ್ವಯಂಸೇವಕ'ನ ಯೋಗ್ಯತೆಯನ್ನು ಮೇಲಿಸ ಸ್ಥಿತಿಗೊಯ್ದುವರಿವರೆ. ಸ್ವಯಂಸೇವಕರೆಂದರೆ, ಬುದ್ಧಿಯಿಲ್ಲದವರು; ಹೇಳಿದಷ್ಟು ಕೇಳುವವರು; ಕೈಯ್ಯೊಳಗಿನ ಕೋಲುಗಳೆಂದು,ಅವರಿಗಾಗಿ ಕೆಟ್ಟ ಆರಿವೆ, ಕೆಟ್ಟ ಕಾಳು, ಕೆಟ್ಟ ವಸತಿಸ್ಥಾನಗಳೇ ಇಲ್ಲಿಯ ವರೆಗೆ ಇದ್ದವು. ಹಿಂದುಸ್ಥಾನೀ ಸೇವಾದಲದ ಮುಖಾಂತರ, ಕಾರ್ಯಮಾಡಿ, ಮುಂದಾಳುಗಳ ಕಣ್ಣಿಗಂಜನವಸಿಕ್ಕಿ, **ದೇಶಸೇವೆ ಮಾಡುವವನು ಮುಂದಾಳುವಿರಲಿ ಅನುಯಾಯಿಯಿರಲಿ ಎಲ್ಲರೂ 'ಸ್ವಯಂಸೇವಕರೇ'** ಎಂದು ತೋರಿಸಿಕೊಟ್ಟು, 'He was instrumental in bringing the elevation of the status of a Valunteer'( ಸ್ವಯಂ ಸೇವಕನ ಯೋಗ್ಯತೆಯ ಬೆಳೆಸಲು ಕಾರಣರಿವರೆ) ಎಂದು ನುಡಿಸಿದರು.

ಜತೆಗಾರರರಿಗೆ ಕಾರ್ಯದ ಮಹತ್ವವ ತಿಳಿಸಿ, ತಮ್ಮಂತೆ ಹಸಿವು-ನೀರಡಿಕೆಗಳ ಮರೆತು ದುಡಿಯಲು ಕಲಿಸುವರು. ಇದರಿಂದ ಇವರಿಲ್ಲದಿದ್ದರೂ ಅನುಯಾಯಿಗಳು, ತಮಗಿತ್ತ ಕಾರ್ಯವನ್ನು ತಾತ್ಸಾರಮಾಡದೆ ಚೆನ್ನಾಗಿ ಮಾಡಿ ಮುಗಿಸುವರು. ಕೆಲಸಗಾರರಿಗಾಗಿ ಹಣ ವೆಚ್ಚ ಮಾಡಲು ಡಾಕ್ಟರರು ಹಿಂದೆ ಮುಂದೆ ನೋಡುವದಿಲ್ಲ. **ದುಡಿಯುವವರಿಗೆ ದುಡ್ಡಿಗೇನು ಕೊರತೆ?** 'ದುಡಿತವು ದುಡ್ಡಿನ ತಾಯಿ' ಎಂದು ಇವರು ಹುರುಪು ಕೊಡುವುದರಿಂದ ಕಾರ್ಯ ಮಾಡುವ ಜನರೆಲ್ಲ ಮನಮುಟ್ಟಿ ದುಡಿಯುವರು. ಆದರೆ ಡಾಕ್ಟರರ ಈ ವೆಚ್ಚಕ್ಕಾಗಿ ಉಳಿದ ಮುಂದಾಳುಗಳದೆಲ್ಲ ಬಹು ಟೀಕೆ. ಆದರೂ ಇವರು ತಮ್ಮ ಕಾಯಕವ ನಡೆಯಿಸಿಯೇ ಇರುವರು.

ಹೀಗೆ ಜತೆಗಾರರ ಗೂಡ ಭೇದ ಮಾಡದೆ ದುಡಿಯುವದರಿಂದ ಇವರ ಕಾರ್ಯಗಳೆಲ್ಲ ಸಹಜವಾಗಿ–ಸುಲಭವಾಗಿ –ಸುಂದರವಾಗಿ ನೆರ

ವೇರುತ್ತವೆ. ಈ ತೆರದ ಗುಣಗಳು ಎಲ್ಲ ಮುಂದಾಳುಗಳಲ್ಲಿರುವದಪರೂಪ. ಅಂತೆಯೇ ಜನರೆಲ್ಲ ಮುಗಿ ಬೀಳುವದಿವರ ಸುತ್ತುಮುತ್ತು. ಇವರ ಅಚ್ಚುಕಟ್ಟುತನ, ಕಷ್ಟ ಸಹಿಷ್ಣುತೆ, ಸಹನಶೀಲತೆ, ಎಂತಹ ನಿರಾಶೆಯುಲ್ಲಿಯೂ ಆಶೆ ಬಿಡದಿರುವದು, ರಾಷ್ಟ್ರಕ್ಕಾಗಿ ಮಾನಾಪಮಾನಗಳ ಲೆಕ್ಕಿಸದಿರುವದೇ ಮೊದಲಾದ ಗುಣಗಳು ಯಾರ ಮನವನ್ನು ಸೆಳೆಯುವದಿಲ್ಲ ?

# ಹರಡೀಕರರ ವಿಚಾರಗಳು

## 'ರಾಜಕಾರಣ

ಭಾರತಭೂಮಿಗೆ ಸ್ವಾತಂತ್ರ್ಯವೆಂದು ? ಎನ್ನುತ್ತ ಯೋಚನೆ ಮಾಡುವದಕ್ಕಿಂತ ಅದನ್ನು ಪಡೆಯುಲು ನಮ್ಮಲ್ಲಿ ಶಕ್ತಿ ಎಷ್ಟಿದೆಯೆಂದು ಯೋಚಿಸುವದೊಳಿತು. ನಾವು ಇಂದೇ ಶಕ್ತರಾದರೆ, ಇಂದೇ ಸ್ವಾತಂತ್ರ್ಯ ನಮಗೆ.

ಖಾದಿಯಿಂದಲೇ ಸ್ವಾತಂತ್ರ್ಯದೊರೆವುದಿಲ್ಲ. ಅದಕ್ಕದು ಸಹಾಯಕ. 'ನನ್ನದೇಶ ನನ್ನ ಒಡವೆ' ಯೆಂದು ಧರಿಸಿದವನಲ್ಲಿ ಹುಟ್ಟಿಸುವದು, ನಮ್ಮ ಧ್ಯೇಯಕ್ಕೆ ಮುಟ್ಟಿಸುವದದು.

ಬ್ರಿಟಿಶರು ಅನ್ಯಾಯ ಮಾಡುತ್ತಾರೆನ್ನುವುದು ಜಾಣತನದ ಮಾತಲ್ಲ. ತಮ್ಮವರ ಹಿತಾಹಿತಗಳ ದೃಷ್ಟಿಯಿಂದ ಅವರು ಹಾಗೆ ಮಾಡುವುದು ಸ್ವಾಭಾವಿಕ, ಯೋಗ್ಯ. ನಾವೇ ಜಾಣರಾಗಿದ್ದರೆ ನಮ್ಮನ್ನು ಸುಲಿಯುವದೆಂತವರು ? ದಡ್ಡರನ್ನು ಜಾಣರು ಮೋಸಗೊಳಿಸುವದಿಲ್ಲವೆ ? ಇದು ಜಗತ್ತಿನ ನಿಯಮ. ನಾವೇ ಬ್ರಿಟಿಶರಾಗಿದ್ದರೆ ಹೀಗೆಯೇ ಮಾಡುತಿದ್ದೆವು. ದೇಶದ ಆರ್ಥಿಕ ದುಃಸ್ಥಿತಿಯು ನಿವಾರಿಸಲು ರಾಜ್ಯಸೂತ್ರಗಳು ನಮ್ಮ ಕೈಯ್ಯಲ್ಲಿರುವದವಶ್ಯ.

ಅಹಿಂಸೆಯಲ್ಲಿ ಡಾಕ್ಟರರಿಗೆ ನಂಬುಗೆಯಿದೆ. ಇವರೂ ಹಿಂದುಸ್ಥಾನೀ ಸೇವಾದಲದ ಎಲ್ಲ ಕೆಲಸಗಾರರೂ ಇಲ್ಲಿಯವರೆಗೆ ಅಹಿಂಸೆಯಿಂದಲೇ ನಡೆದಿರುವರು. ಈ ಕೆಲಸಗಾರರ ಅಹಿಂಸಾವ್ರತದ ಪರೀಕ್ಷೆ

ಕಾಲಗಳು ಅನೇಕಸಾರೆ ಬಂದಿವೆ. ಸೇವಾದಲ ವ್ಯಾಯಾಮವಿದ್ಯಾಪೀಠದ ವಾರ್ಷಿಕ ಉತ್ಸವದ ಕಾಲಕ್ಕೆ, ಬಾಗಿಲುಕೋಟೆಯಲ್ಲಿ ಮಸೀದೆಯು ಮುಂದೆ, ಸ್ವಯಂಸೇವಕರು ತಿಳಿಯದೆ ವಾದ್ಯ ಬಾರಿಸುತ್ತ ಹೋದಾಗ ಅಲ್ಲಿಯ ಮುಸಲ್ಮಾನರು ಅವರನ್ನೆಲ್ಲ ಒಳಿತಾಗಿ ಥಳಿಸಿದರು. ಇದಕ್ಕೆ ಪ್ರತೀಕಾರವಾಗಿ, ತಮ್ಮ ನಾಯಕನ ಅಪ್ಪಣೆ ಮೇರೆಗೆ ಒಬ್ಬ ಸ್ವಯಂಸೇವಕನೂ ಕೈಯೆತ್ತಲಿಲ್ಲ. ಸಂಜೆಯಲ್ಲಿ ಹರಡೀಕರರು ಸಭೆ ಮಾಡಿ, ತಮ್ಮ ಜನರು ಹಣ್ಣು ಹಣ್ಣಾಗಿ ಹೊಡೆಯಿಸಿಕೊಂಡಿದ್ದರೂ, ತಮ್ಮದು ಅಹಿಂಸಾವ್ರತ ಪರಿಪಾಲನೆಯಿರುವದರಿಂದ ಯಾರ ವಿರುದ್ಧವಾಗಿಯೂ, ಸೇಡುತೀರಿಸುವ ಯತ್ನವನ್ನಾಗಲಿ, ಸರಕಾರದಲ್ಲಿ ಕೆಲಸ ನಡೆಯಿಸುವದನ್ನಾಗಲಿ, ತಾವು ಮಾಡುವದಿಲ್ಲೆಂದು ಜಾಹೀರವಾಗಿ ಹೇಳಿದರು. ಇಂತಹ ಎಷ್ಟೋ ಪ್ರಸಂಗಗಳಲ್ಲಿ ಹರಡೀಕರರು ಅಹಿಂಸೆಯಿಂದಲೇ ವರ್ತಿಸಿರುವರು.

## ಸಮಾಜ

ಹಿಂದು-ಮುಸಲ್ಮಾನ, ಬ್ರಾಹ್ಮಣ-ಬ್ರಾಹ್ಮಣೇತರ ಜಗಳಗಳು ನಮ್ಮ ನಾಡಿನೇಳ್ಗೆಗೆ ತೊಂದರೆಯಿತ್ತಿವೆ. ಜನಜಾಗೃತಿಯಾಗದಿರುವದೇ ಇದಕ್ಕೆ ಮೂಲ.

ಒಂದೇ ಜಾತಿಯಾಗುವದೊಳಿತಲ್ಲ. ವಿವಿಧ ಜಾತಿಗಳಿರುವದವಶ್ಯಕ. ಇವುಗಳ ಮೂಲಕ ಜನರಲ್ಲಿ ಸಂಘಟನೆಯುಂಟಾಬೇಕೆಂದೇ ಜಾತಿಗಳನ್ನು ನಿರ್ಮಿಸಿದವರ ಉದ್ದೇಶವಿರಬೇಕು. ಆದರೆ ಪರಸ್ಪರರಲ್ಲಿದ್ದ ದ್ವೇಷಾಸೂಯೆಗಳನ್ನು ಕಳೆದು ಸಹಾನುಭೂತಿಯು ಹುಟ್ಟಿಸಬೇಕು.

ಪುನರ್ವಿವಾಹ ಪ್ರೌಢವಿವಾಹಗಳು ಬೇಕು. ಅವುಗಳ ಅವಶ್ಯಕತೆಯುಂಟಾದುದರಿಂದಲೇ ಜನರು ಅವುಗಳನ್ನು ಬೇಡುತ್ತಿರುವದು. ಸ್ತ್ರೀ-ಪುರುಷರಲ್ಲಿ ನೈಸರ್ಗಿಕವಾಗಿ ಭೇದವಿದೆ. ಪುರುಷರಷ್ಟು ಕಾರ್ಯವು ಸ್ತ್ರೀಯರಿಂದಾಗಲಾರದು. ಆದರೆ ಸ್ತ್ರೀಯರನ್ನು ಮುಂದೆ ತಂದು, ಪುರುಷರಿಗೆ ಸಹಾಯಕರನ್ನಾಗಿ ಮಾಡಬೇಕು.

# ಧರ್ಮ

ಚಿಕ್ಕಂದಿನಲ್ಲಿ ಡಾಕ್ಟರರು, ತುಕಾರಾಮ ಸಾಧುಗಳ ವಿಚಾರಗಳ ನ್ನೊಳಗೊಂಡ ' ಮುಮುಕ್ಷು' ಪತ್ರಿಕೆಯಿಂದ, 'ಭಕ್ತಿಮಾರ್ಗ ಪ್ರದೀಪ' 'ರಾಮದಾಸ' ಮೊದಲಾದ ಪುಸ್ತಕಗಳಿಂದ ಧಾರ್ಮಿಕ ವಿಚಾರಗಳನ್ನು ಸಂಪಾದಿಸಿದ್ದರು. ಕೊಲ್ಹಾಪುರದಲ್ಲಿ, ವಿಜಾಪೂರಕರರು ತೆರೆದಿದ್ದ ಸಮರ್ಥ ವಿದ್ಯಾಲಯದಿಂದ, ಬಗಡಗೇರೆ ಸಾಧುಗಳ ಉಪದೇಶದಿಂದ ಧರ್ಮದ ವಿಷಯ ತಿಳಿದುಕೊಂಡಿದ್ದರು.

೧೯೦೫–೧೯೧೩ರ ವರೆಗೆ ಸ್ನಾನಮಾಡದೆ ಬಾಯಲ್ಲಿ ನೀರು ಹಾಕುತ್ತಿರಲಿಲ್ಲ ಇವರು. ಎರಡು ಹೊತ್ತು ಸಂಧ್ಯಾವಂದನೆ, ಭಗವದ್ಗೀತೆಯ ಒಂದು ಅಧ್ಯಾಯ ಪಾರಾಯಣ, ಬಗಡಗೇರೆ ಸಾಧುಗಳ ಮಂತ್ರೋಪದೇಶದ ಜಪ ತಪ್ಪದೆ ದಿನಾಲು ನಡೆಯುತ್ತಿದ್ದವು. ಕರ್ಮಠ ಬ್ರಾಹ್ಮಣನೆಂದು ಜನರಾಡಿಕೊಳ್ಳುತ್ತಿದ್ದರಿವರನ್ನು ಆಗ.

೧೯೧೩ರಲ್ಲಿ ಅಮೇರಿಕೆಗೆ ಹೋಗಲು, ಹಡಗವನ್ನೇರಿದ ಕೂಡಲೆ ಇವರ ಕರ್ಮಠತನ ಸಡಿಲಾಗಹತ್ತಿತು. ಹಡಗದಲ್ಲಿ ಸ್ನಾನ, ಸಂಧ್ಯಾ, ಜಪತಪಗಳು ಹಾಸ್ಯಾಸ್ಪದವಾಗಿ ತೋರತೊಡಗಿದವು. ಇವುಗಳನ್ನು ಜನರಿಗೆ ಕಾಣದಂತೆ ಮಾಡಲು ಸಾಧ್ಯವಿತ್ತು. ಆದರೆ ಕರ್ಮಠತನದ ನಿಶಾನೆಯಾದ ಚಂಡಿಕೆಯನ್ನು ಮುಚ್ಚಿಟ್ಟುಕೊಳ್ಳುವದು ಮಾತ್ರ ಡಾಕ್ಟರರಿಗೆ ಕಷ್ಟವಾಯಿತು. ಆದ್ದರಿಂದ ಕೂಡಲೆ ಅದನ್ನು ಮುಚ್ಚುಮರೆಯಿಂದ ಕತ್ತರಿಸಿ ಒಗೆದು ಬಿಟ್ಟರು. ಹಿಂದಿನಿಂದ ಒಂದೊಂದೇ ಮಾಯವಾಗಿ, ಅವರು ಅಮೇರಿಕೆಯಿಂದ ಬಂದಾಗ, ಇವರೊಂದು ಕಾಲದಲ್ಲಿ ಕರ್ಮಠರಿದ್ದರೆಂಬುದು ಕನಸುಮನಸಿನಲ್ಲಿ ಕೂಡ ಯಾರಿಗೂ ಬರುವಂತಿರಲಿಲ್ಲ. ಇದಕ್ಕೆಲ್ಲ ಅಮೇರಿಕೆಯ ವಾಸವೇ ಕಾರಣವೆಂದು ಇವರೆನ್ನುವದು. ಇಲ್ಲಿಗೆ ಬಂದನಂತರ ಎಷ್ಟೋದಿನಗಳ ವರೆಗೆ ಜನಿವಾರ ಚಂಡಿಕೆಗಳಿಲ್ಲದೆ ಇದ್ದರು. ಮುಂದೆ ಕೆಲವು ಕರ್ಮಠ ಬ್ರಾಹ್ಮಣರು 'ಇದು ಸರಿಯಲ್ಲ; ಚಂಡಿಕೆ, ಜನಿವಾರಗಳು ಅವಶ್ಯವಾಗಿರಬೇಕೆಂ'ದರು. ಗೋಕರ್ಣದಲ್ಲಿ ಕೂಡಿದ ಕರ್ನಾಟಕ ಪ್ರಾಂತಿಕ ಪರಿಷತ್ತಿಗೆ ಅಧ್ಯಕ್ಷರಾಗಿ ಬಂದ ದ್ವಾರಕಾಮಠದ

ಶಂಕರಾಚಾರ್ಯರೂ ಈ ವಿಷಯದಲ್ಲಿ ಹೇಳಿದುದರಿಂದ, ' ಹಾವೇರಿ ನ್ಯಾಯ ' ಮಾಡಿ ಡಾಕ್ಟರರು ಜನಿವಾರವೊಂದನ್ನು ಹಾಕಿಕೊಂಡಿರುವರು.

ಸದ್ಯಕ್ಕೆ ಅವರು ಯಾವ ಧಾರ್ಮಿಕವಿಧಿಯನ್ನೂ ನೆರವೇರಿಸುವದಿಲ್ಲ. ತಂದೆತಾಯಿಗಳ ಶ್ರಾದ್ಧವನ್ನು ಸಹ ಅವರು ಮಾಡುವದಿಲ್ಲ. ' ಬರೀ ನಾಲ್ಕು ಜನರಿಗೆ ಊಟ ಹಾಕಿದರೆ, ನಿಜವಾದ ಶ್ರಾದ್ಧವಾದಂತಾಗಲಿಲ್ಲ. ಮಕ್ಕಳು ತಮ್ಮ ಸತ್ಕರ್ಮಗಳಿಂದ ತಾಯಿತಂದೆಗಳ ಹೆಸರು ಉಳಿಸುವದೇ ನಿಜವಾದ ಶ್ರಾದ್ಧ ' ವೆಂದು ಅವರೆನ್ನುವುದು.

ದೇಶಸೇವೆಯೇ ನನ್ನ ಧರ್ಮ; ಅದರಿಂದಲೇ ಮೋಕ್ಷ, ಅದರಿಂದಲೇ ಸರ್ವಸ್ವ; ಅದರ ಹೊರತು ಮತ್ತಾವ ಉಚ್ಚ ಕರ್ತವ್ಯವು ನನಗಿಲ್ಲ; ಇದರಲ್ಲಿ ಯಾವ ಭೇದಭಾವನೆಗೂ ಸ್ಥಳವಿಲ್ಲ. ಉಳಿದ ಯಾವುದೇ ಧಾರ್ಮಿಕಕೃತ್ಯ, ಆಚರಣೆ, ನಿಯಮಗಳಲ್ಲಿ ನನ್ನ ವಿಶ್ವಾಸವಿಲ್ಲ. ಎಲ್ಲರ ಹಿತಾಹಿತಗಳಿಗೆ ಕಾರಣವಾದ, ಧರ್ಮಗಳಿಗೆಲ್ಲ ಮೂಲವಾದ, ಮಹಾಶಕ್ತಿಯೊಂದು ಈ ವಿಶ್ವದ ಹಿಂದೆ ಇರುತ್ತದೆ. ಅದಕ್ಕೆಯೇ ದೇವರೆನ್ನುತ್ತಿದ್ದರೆ, ಆ ದೇವರನ್ನು ಕುರಿತು, ಶಾಂತ ಸಮಾಧಾನಕರ ವೇಳೆಯಲ್ಲಿ ಪ್ರಾರ್ಥನೆ ಮಾಡುತ್ತಿರುತ್ತೇನೆ. ಶ್ರೀ ಕೃಷ್ಣನ ಕರ್ಮಯೋಗದಲ್ಲಿ ನಂಬುಗೆಯಿರುವದರಿಂದ, ದೈವವಾದದಲ್ಲಿ ನನ್ನ ವಿಶ್ವಾಸವಿಲ್ಲವೆಂದು ಹರಡೀಕರರ ಶ್ರದ್ಧೆ.

## ತಾಯಿನುಡಿ; ನಾಡನುಡಿ

ಹರಡೀಕರರ ಮನೆಮಾತು ಮರಾಟಿ. ಮನೆಮಾತು ಯಾವದಿದ್ದರೂ ಸರಿ, ಹುಟ್ಟಿ ಬೆಳೆದ ನಾಡಿನ ನುಡಿಯನ್ನೆ ನಮ್ಮ ನುಡಿಯನ್ನಾಗಿ ತಿಳಿದು ಕಾರ್ಯಮಾಡುವುದು, ನಮ್ಮ ಕರ್ತವ್ಯವೆಂಬ ಲೋಕಮಾನ್ಯರ ಮಾತನ್ನಿವರು ಒಪ್ಪುವರು; ಕನ್ನಡ–ಮರಾಟಿಯ ಪ್ರಶ್ನೆ ಬಂದಾಗೆಲ್ಲ ಇದನ್ನೆ ಅವರು ಆಚರಿಸಿದುದು.

# ಭುವನೇಶ್ವರಿಯಲ್ಲಿ ಬಿನ್ನಹ

ಇಂದಿಗೆ ಡಾಕ್ಟರರಿಗೆ ೪೫ ವರುಷ. ನಾಡಿಗಾಗಿ ತನುಮನಗಳ ಸರ್ಪಿಸಿ, ಭಾರತ ಸ್ವಾತಂತ್ರ್ಯಸಮರದಲ್ಲಿ ಧುಮುಕಿ, ೪–೫ ಸಲ ಸೆರೆಮನೆಯ ಕಂಡು ಹೊರಬಿದ್ದರು. ನಾಗಪುರ ಸತ್ಯಾಗ್ರಹದಲ್ಲಿ (೧೯೨೩) ಕಾರಾಗೃಹಕ್ಕೆ ಹೋದುದು ಮೊದಲನೆಯದು. ನಂತರ ೧೯೩೦ ರಲ್ಲಿ ಆಗಸ್ಟ್ ೨ನೆ ತಾರೀಖಿನ ದಿವಸ ಮುಂಬೈಯಲ್ಲಿ ವರ್ಕಿಂಗ್ ಕಮಿಟಿಯ ಸಭಾಸದರೆಂದು ಹಿಡಿಯಲ್ಪಟ್ಟು, ೩ ತಿಂಗಳು ಸಾದಾಶಿಕ್ಷೆಯನ್ನು ಹೊಂದಿದರು. ಇದನ್ನು ಅನುಭವಿಸಿ ಹುಬ್ಬಳ್ಳಿಗೆ ಬರುತ್ತಲೇ ಮುಂಬೈ ವಾರಂಟಿನ ಅನುಸಾರವಾಗಿ ೩೧–೧೨–೧೯೩೦ನೇ ದಿವಸ ಹಿಡಿಯಲ್ಪಟ್ಟು ಮುಂಬಯಿಗೆ ಹೋದರು. ಅಲ್ಲಿ ದಂಡಕ್ಕಾಗಿ ಭೋಗಿಸಬೇಕಾದ ಅವಧಿಯನ್ನು ಹಿಡಿದು ೯॥ ತಿಂಗಳು ಸಶ್ರಮ ಶಿಕ್ಷೆಯನ್ನು ಹೊಂದಿದರು. ಮುಂದೆ ೧೯೩೨ನೆ ಜನವರಿ ೧೬ನೆ ತಾರೀಖಿನ ದಿವಸ ಮುಂಬಯಿಯಲ್ಲಿ ಮರಳಿ ಹಿಡಿಯಲ್ಪಟ್ಟು, ಹಿಂಡಲಗಿ (ಬೆಳಗಾವಿ) ಕಾರಾಗೃಹದಲ್ಲಿ ಡೆಟಿನ್ಯೂಯೆಂದು ೨ ತಿಂಗಳುಗಳವರೆಗೆ ಇದ್ದರು. ಈ ಅವಧಿಯು ಮುಗಿಯುತ್ತಲೇ ಸರಕಾರದವರು ಡಾಕ್ಟರರನ್ನು ಧಾರವಾಡ ಜಿಲ್ಲೆಯ ಗಜೇಂದ್ರಗಡಕ್ಕೆ ಒಯ್ದು, ಅಲ್ಲಿ ದಿನಾಲು ಪೋಲೀಸರಿಗೆ ವರದಿಕೊಡುತ್ತಿರಬೇಕೆಂದು ಅಪ್ಪಣೆಮಾಡಿದರು. ಅಪ್ಪಣೆಯನ್ನು ಮುರಿದದ್ದರಿಂದ ಗದಗ ತಾಲೂಕ ಕಚೇರಿಯಲ್ಲಿ ೧೮ ತಿಂಗಳು ಸಶ್ರಮ ಶಿಕ್ಷೆ, ೧೦೦ ರೂ. ದಂಡ, ಅದನ್ನು ಕೊಡದಿದ್ದರೆ ಪುನಃ ೩ ತಿಂಗಳು ಸಶ್ರಮ ಶಿಕ್ಷೆ ಹೊಂದಿದರು. ಹೀಗೆ ಡಾ. ಹರಡೀಕರರು ಡೆಟಿನ್ಯೂ ಆಗಿ ಹೋದದ್ದನ್ನು ಹಿಡಿದರೆ ಒಟ್ಟಿಗೆ ಕಾರಾಗೃಹಕ್ಕೆ ೫ ಸಲ ಹೋಗಿ ಬಂದಿರುವರು.

ಚಿಕ್ಕವರಿರುವಾಗ ಎದ್ದ ಸೈನಿಕ ಬೀಜವು ಮೊಳಕೆಯೊಡೆದು ಸಸಿಯಾಗಿ ಗಿಡವಾಗಿ ಬೆಳೆದು ಸೇವಾದಲದಂತಹ ಸಂಸ್ಥೆಯನ್ನು ಸ್ಥಾಪಿಸಿತು. ಸಾವಿರಾರು ಸೈನಿಕರ ನೆರೆಸಿತು. ಡಾಕ್ಟರರನ್ನು ಸೇನಾಪತಿಗಳನ್ನಾಗಿ ಮೆರೆಸಿತು. ೧೩೦೦ ವರುಷಗಳಾಚೆ ಚಾಲುಕ್ಯರ ಪುಲಿಕೇಶಿಯು ಉತ್ತರದ ಹರ್ಷವರ್ಧನನನ್ನು ಸೋಲಿಸಿ ಓಡಿಸಿದ್ದನಂತೆ; ಇಡೀ ಭಾರತವ ನಡುಗಿಸಿದ್ದನಂತೆ; ಇಂದು ಭಾರತವನಾಳುವವರು ಬ್ರಿಟಿಷರು. ಪುಲಿಕೇಶಿಯ ಸೈನಿಕರು ರಣದುಂದುಭಿಯ ಮೊಳಗಿಸಿ, ಹಗೆಯ ಬಗೆಯನು ನಡುಗಿಸಿ, ಕನ್ನಡ ನಾಡಿನ ಗುಡಿಯ ಹಿಡಿದು, ಉಕ್ಕಿಬರುವ ಉತ್ಸಾಹ ತಳೆದು ಕಾಳೆಗಕ್ಕೆ ನಡೆದರೆ, ಸೇವಾದಲದ ಸೈನಿಕರು ಭಾರತಾಂಬೆಯ ಜಯಜಯಕಾರದಲಿ, ಸತ್ಯಾಗ್ರಹ ಸಮರದಲಿ, ಭಾರತದ ಗುಡಿಯ ಹಿಡಿದು ಶಾಂತಿ-ಸಾಹಸವ ತಳೆದು, ಎದುರಿಸಿದರು ಒಂದ ಕಷ್ಟಗಳನ್ನು. ಅವರದು ಹಿಂಸೆ, ಇವರದು ಅಹಿಂಸೆ; ಅವರದು ಶೌರ್ಯ, ಇವರದು ಧೈರ್ಯ. ಅವರದು ರಣೋತ್ಸಾಹವಾದರೆ ಇವರದು ರಾಷ್ಟ್ರೋತ್ಸಾಹ. ಮುಡಿಗೆ ಮೈಜೋಡುಗಳಿಂದ, ಕತ್ತಿ-ಕಠಾರಿಗಳಿಂದ, ಮದ್ದು-ಗುಂಡುಗಳಿಂದ ಹಗೆಯನೆದುರಿಸುವದು ಬೇರೆ; ಬರಿ ಮೈ-ಕೈಗಳಿಂದ, ಶಾಂತಿ-ಸಮಾಧಾನಗಳಿಂದ, ಸತ್ಯ-ಅಹಿಂಸೆಗಳಿಂದ ವೈರಿಯನೆದುರಿಸುವದು ಬೇರೆ. ಅಂದು ಚಾಲುಕ್ಯರ ಸೈನಿಕರು ಹರ್ಷನನ್ನು ಹೊಡೆದೋಡಿಸಿದರೆ ಇಂದು ಸೇವಾದಲದ ಸೈನಿಕರು ಬ್ರಿಟಿಷರಿಗೆ ಬಿಸಿಹಚ್ಚಿರುವರು.

ಏಳನೇ ಶತಮಾನದಲ್ಲಿ ಶೌರ್ಯ ಪರಾಕ್ರಮಗಳಿಂದ ಹರ್ಷನನ್ನು ಗೆದ್ದು ಭಾರತದಲ್ಲೆಲ್ಲ ಕೀರ್ತಿಯನ್ನು ಪುಲಿಕೇಶಿಯು ಬೆಳಗಿಸಿದರೆ, ಇಪ್ಪತ್ತನೆಯ ಶತಮಾನದಲ್ಲಿ, ಭಾರತ ಸ್ವಾತಂತ್ರ್ಯಸಮರದಲಿ, ಸತ್ಯ-ಅಹಿಂಸೆಗಳಿಂದ ಕಾದಾಡಿ, ಕರ್ನಾಟಕದ ಕೀರ್ತಿಯನ್ನು ಭಾರತದಲ್ಲೆಲ್ಲ ಬೆಳಗಿಸಿದೆ ಸೇವಾದಲ. ಸೇವಾದಲವೆಂದರೆ ಅರಸನ ಪಡೆಯಲ್ಲ; ಕಾರ್ಯಕರ್ತರ ಸಂಸ್ಥೆ. ಸೇವಾದಲದ ಶ್ರೇಯಸ್ಸಿಗೆ ಅದರ ಕಾರ್ಯ-ಕರ್ತರ ದುಡಿತ ಕಾರಣ. ಈ ಕಾರ್ಯಕರ್ತರ ಕೂಟಕ್ಕೆ ಹರಡೀಕರರು ಕಾರಣ. ರಾಷ್ಟ್ರೀಯ ಸಭೆಯ ಒಂದಂಗವಾಗಿ ಕಾರ್ಯ ಮಾಡಿದರೂ

ರಾಷ್ಟ್ರೀಯ ಸಭೆಯು ಕಟ್ಟು ಹೋಯಿತು; ಸೇವಾದಲದ ಕಟ್ಟು ಉಳಿಯಿತು. ೪೮ ವರುಷ ಸ್ವಾತಂತ್ರ್ಯಕ್ಕಾಗಿ ಹೆಣಗಾಡುತ್ತಿರುವ ಸಂಸ್ಥೆಗಿಂತ ೭-೮ ವರುಷಗಳಲ್ಲಿ ಕಾರ್ಯಮಾಡಿದ ಸಂಸ್ಥೆಗೆ ಬೆದರಿರುವರು ಬ್ರಿಟಿಷರು. ಇಂದು ಸೇವಾದಲ ಸತ್ತು ಹೋಗಿದೆ. ಆದರ ಚೈತನ್ಯವು ರಾಷ್ಟ್ರಮಯವಾಗಿದೆ. ತರುಣರ ಕಣಕಣಗಳಲ್ಲಿ ಕೂಡಿ ಅವ್ಯಕ್ತರೂಪದಲಿ ಎಲ್ಲೆಡೆಯಲ್ಲಿಯೂ ತುಂಬಿ ಕಾರ್ಯ ಮಾಡುತಿದೆ.

ಅದನ್ನು ಹುಟ್ಟಿಸಿದ ವ್ಯಕ್ತಿಯಲ್ಲಿ ಅನೇಕ ದೋಷಗಳು ಕಂಡು ಬಂದರೂ ಅನಿತ್ಯ ದೇಹದ ಕೂಡ ಅವೆಲ್ಲ ಮಾಯವಾಗುವವೇ. ಉಳಿಯುವದು ಕಾರ್ಯ, ಕಾರ್ಯದ ಫಲ. ಇವೇ ಮುಂದೆ ರಾಷ್ಟ್ರದ ಇತಿಹಾಸದಲ್ಲಿ ತರುಣರ ಸ್ಫೂರ್ತಿಗೆ ಸೆಲೆ; ರಾಷ್ಟ್ರದ ಅಭಿಮಾನಕ್ಕೆ ಮೂಲ; ದೇಶದ ಏಳಿಗೆಗೆ ಜೀವಾಳ. ವ್ಯಕ್ತಿಯನ್ನು ಕಂಡು ಹೀಗಳೆವುದಕ್ಕಿಂತ ಶಕ್ತಿಯನ್ನು ಕಂಡು ಹುರಿದುಂಬಿಸುವದು ಮೇಲು. ಕುಂದುಕೊರತೆಗಳು ಯಾರಲ್ಲಿರುವುದಿಲ್ಲ? ಅಂಕು-ಡೊಂಕುಗಳು ಯಾರಲ್ಲಿ ಸಿಗುವುದಿಲ್ಲ?

ಸೇವಾದಲದಂತಹ ವೀರಸಂಸ್ಥೆಯನ್ನು ಹುಟ್ಟಿಸಿ, ಕನ್ನಡಿಗರೆಂದರೆ ಆಲಸಿಗಳು, ಆರಂಭಶೂರರು, ಅಚ್ಚುಕಟ್ಟುತನವಿಲ್ಲದವರು; ಹೇಡಿಗಳು, ಕೇಡಿಗಳು ಕೈಲಾಗದವರೆಂಬ ಕೂಗನ್ನು ಹೋಗಲಾಡಿಸಿ, ಹಿಂದಿನ ಜೀವಕಳೆಯನ್ನಿಂದು ತುಂಬಿ ತೋರಿದ ಡಾ. ಹರಡೀಕರರ ಅಭಿಮಾನವಿಲ್ಲದ ಕನ್ನಡಿಗನಾವನು?

ಕನ್ನಡ ನಾಡಿನಲ್ಲಿ ಹುಟ್ಟಿಬೆಳೆದು, ತಾಯಿನಾಡಿನೇಳ್ಗೆಗೈದು, ಕರ್ನಾಟಕದ ಕರ್ಮವೀರತೆಯ ತೋರಿದ, ಕನ್ನಡಿಗ ಡಾ. ಹರಡೀಕರರು ಆಯುರಾರೋಗ್ಯವ ಪಡೆದು, ಶಾಂತಿ-ಸಮಾಧಾನವ ತಳೆದು, ಶೌರ್ಯಸಾಹಸಗಳನಿಮ್ಮಡಿಸಿ, ಜೀವನದ ಗುರಿಯ ನೆರವೇರಿಸಿ, ಕನ್ನಡನಾಡಿನ ಕೀರ್ತಿಯನ್ನು ಧರೆಯಲೆಲ್ಲ ಮೆರೆಯಿಸಲೆಂದು ಕನ್ನಡಾಂಬೆ ಭುವನೇಶ್ವರಿಯಲ್ಲಿ ಬರೆಹಗಾರನ ಬಿನ್ನಹ.

ವಂದೇ ಮಾತರಂ

ಅಚ್ಚಿನಲ್ಲಿವೆ! ಅಚ್ಚಿನಲ್ಲಿವೆ!

ಸುಮಾರು ೨೦೦ ಪುಟಗಳ ಐತಿಹಾಸಿಕ ಗ್ರಂಥ.

# ಶ್ರೀಮದಾನಂದತೀರ್ಥರ ಚರಿತ್ರೆ

ಮತ್ತು

# ಶ್ರೀಮಜ್ಜಯತೀರ್ಥರ ಚರಿತ್ರೆ

ಲೇ:— ಶ್ರೀ. ನಾರಾಯಣಾಚಾರ್ಯ ಶ್ರೀನಿವಾಸಾಚಾರ್ಯ

ರಾಜಪುರೋಹಿತ

ಕರ್ನಾಟಕ ಇತಿಹಾಸ ಸಂಶೋಧಕ, ಧಾರವಾಡ.

ಈ ಗ್ರಂಥದಲ್ಲಿ ಶ್ರೀಮನ್ಮಧ್ವಾಚಾರ್ಯರ ಚರಿತ್ರೆಯನ್ನೂ ಶ್ರೀಮಟ್ಟೀಕಾಚಾರ್ಯರ ಚರಿತ್ರೆಯನ್ನೂ ಐತಿಹಾಸಿಕ ದೃಷ್ಟಿಯಿಂದ ಸಪ್ರಮಾಣವಾಗಿ ವಿವೇಚಿಸಿ ಬರೆದಿದ್ದಾರೆ. ಇದಲ್ಲದೆ ಈ ಗ್ರಂಥದಲ್ಲಿ ಈ ಉಭಯ ಧರ್ಮವೀರರ (೧) ಕಾಲನಿರ್ಣಯ (೨) ಶಾಖಾನಿರ್ಣಯ (೩) ಸ್ಥಳನಿರ್ಣಯ (೪) ದ್ವೈತಸಿದ್ಧಾಂತಸಾರ (೫) ಸಮಸ್ತ ದ್ವೈತ ಮಠಗಳ ಗುರುವಂಶವೃಕ್ಷ ವಿಚಾರಪ್ರವರ್ತಕವಾದ ೫ ಪರಿಶಿಷ್ಟಗಳಿವೆ.

ಪೇಸನ

# ವಿಜಯನಗರದ ವೃತ್ತಾಂತ

ಬರೆದವರು:- ಎ. ಎಮ್. ಪಾಟೀಲ. ಬಿ. ಎ. (ಆನರ್ಸ್)

ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರದ ರಾಜ್ಯದಲ್ಲಿ ತಿರಿತು ನುರಿತು ಬರೆದ, ಪೋರ್ತುಗೀಜ್ ಪ್ರವಾಸಿಯಾದ ಪೇಸನ (paes) ಲೇಖನದ (Chronicle) ಅನುವಾದ. ವಿಜಯನಗರದ ವೈಭವದ ಗುರಿಯು ಂಪೆಯ ಹಾಳಿನಲ್ಲಿಯೂ ಹೂಳಿದೆ ಎಂದು ಹೇಳುವ, ಹೇಳಿ ತೋರಿಸುವ ಗನ್ನಡಿ ಇದು. ವೇದಕ್ಕೆ ಸಾಯಣರ ಭಾಷ್ಯವಿದ್ದಂತೆ ವಿಜಯನಗರದ ...ಮನ್ನರಿಯಲು ಅವಶ್ಯವಿದು.

# ನಮ್ಮ ಪುಸ್ತಕಗಳು

ನಾಡದೇವಿ. ಕವನಸಂಗ್ರಹ, ಹೇಜೀಬ, ಮೋವ್ರಂಡಿ ೧- ೪-೦

ವಿಕಾಸವಾದ. ಕುಲಕರ್ಣಿ ನಾರಾಯಣರಾಯರು ಎಂ. ಎ. ಎಲ್‌ಎಲ್. ಬಿ. ೧- ೪-೦

ಕಾಮದಹನ. ಪ್ರೊ. ಜಾಗೀರದಾರರ ಏಕಾಂಕ ನಾಟಕಗಳು ೦- ೮-೦

ಸಂಪಿಗೆ. ಕುಲಕರ್ಣಿ ಶ್ರೀನಿವಾಸರಾಯರ ಕತೆಗಳು ೦- ೬-೦

ಆಕಾಶದೊಳಗಿನ ಅದ್ಭುತ ಚಮತ್ಕಾರ. ಪ್ರೊ. ಪಾಟೀಲ ೦-೧೪-೦

ಧರ್ಮಸಂಭವ. ಪಂ. ತಾರಾನಾಥರಾಯರು ೧- ೪-೦

ಹಿಂದುಸ್ಥಾನದ ರಾಜ್ಯಪದ್ಧತಿಗಳು. ಎ. ಹ. ಒಡೆಯರ ೧- ೨-೦

ಖಾದೀಶಾಸ್ತ್ರ. ಹರ್ಡೀಕರ ಮಂಜಪ್ಪನವರು. ೧- ೨-೦

ಏಶಿಯಾ ಖಂಡದ ಜಾಗ್ರತಿ. ದೊರೆಸ್ವಾಮಿ ಅಯ್ಯಂಗಾರ್ ಎಂ. ಎ. ಬಿ. ಎಲ್. ೧- ೨-೦

ಭಾಷಾಶಾಸ್ತ್ರ. ಪ್ರೊ. ಜಾಗೀರದಾರರು ೧- ೦-೦

ಮಹಾರಾಷ್ಟ್ರದ ಮೂಲ. ಜೋಶಿ ಶಂಕರರಾಯರು (ಅಚ್ಚಿನಲ್ಲಿದೆ)

# ಇತರ ಪುಸ್ತಕಗಳು

ಅಡಾಲ್ಫ್ ಹಿಟ್ಲರ್. ಕು. ಶ್ರೀನಿವಾಸರಾಯರು ೦-೪-೦

ವೀರವಲ್ಲಭಭಾಯಿ. ಚಿಕ್ಕೋಡಿ ಅನಂತರಾಯರು ೦-೮-೦

ಮೋತಿಲಾಲನೆಹರು. ಬಿ. ಕಲ್ಯಾಣಶರ್ಮಾ ೦-೪-೦

ಕನ್ನಡದ ಕಿಡಿಗಳು. ಹೈದರಾಬಾದಿನ ಗೆಳೆಯರಗುಂಪು ೦-೮-೦

ಜವಾಹರಲಾಲ ನೆಹರು. ಮ. ಗೋವರ್ಧನರಾಯರು ೦-೮-೦

ರಾಮಕೃಷ್ಣ ಚರಿತಾಮೃತ. ದಿವಾಕರ ರಂಗರಾಯರು ೧-೨-೦

**ಸಾಹಿತ್ಯ ಭಂಡಾರ.**
ಮರಾಠಾಓಣಿ, ಹುಬ್ಬಳ್ಳಿ